ಸಂಪುಟ ೧೧ ಸಂಚಿಕೆ ೩ ಸೆಪ್ಟೆಂಬರ್ 1990

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 15
ಆಜೀವ ಚಂದಾ : ರೂ. 150

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

ಬ್ಯಾಂಕಿಂಗ್ ಪ್ರಪಂಚ

ಸಂಪುಟ ೧೧ ಸೆಪ್ಟೆಂಬರ್ ೧೯೯೦ ಸಂಚಿಕೆ ೩

# ಬ್ಯಾಂಕಿಂಗ್ ಕಮ್ಮಟ: ನೂರು ದಿನ

ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿಯ ಆಶ್ರಯದಲ್ಲಿ ಈ ತಿಂಗಳ ಕೊನೆಯಲ್ಲಿ ಬೆಂಗಳೂರಿನಲ್ಲಿ ನಡೆಯಲಿರುವ ಬ್ಯಾಂಕಿಂಗ್ ಕಮ್ಮಟ ಮಹತ್ತ್ವಪೂರ್ಣವಾದ್ದು. ಏಕೆಂದರೆ ಅದು ನೂರನೆಯ ದಿನವನ್ನು ದಾಟಿ ಮುನ್ನಡೆಯುತ್ತಿದೆ.

ಹತ್ತು ವರ್ಷಗಳ ಹಿಂದೆ 'ಬ್ಯಾಂಕಿಂಗ್ ಪ್ರಪಂಚ' ಪತ್ರಿಕೆಯನ್ನು ಸ್ಥಾಪಿಸಿದಾಗ ನಮಗೆ ಎದುರಾದ ಒಂದು ದೊಡ್ಡ ಸಮಸ್ಯೆಯೆಂದರೆ, ಇದಕ್ಕೆ ಲೇಖನಗಳನ್ನು ಹೊಂದಿಸುವುದು. ಬ್ಯಾಂಕಿಂಗ್ ಕ್ಷೇತ್ರಕ್ಕೆ ಸಂಬಂಧಿಸಿದ ಈ ಪತ್ರಿಕೆಗೆ ಲೇಖನಗಳು ಈ ಕ್ಷೇತ್ರದಲ್ಲಿ ಕಾರ್ಯನಿರತರಾದವರಿಂದಲೇ ಬರಬೇಕೆಂದು ನಿರೀಕ್ಷಿಸುವುದು ಸಹಜವಾಗಿತ್ತು. ಚಪ್ಪಲಿ ಮೆಟ್ಟಿದವನಿಗಷ್ಟೇ ಅದು ಎಲ್ಲಿ ಕಚ್ಚುವುದೆಂಬುದು ಗೊತ್ತಾದೀತು. ಅದರ ನೋವಿನ ಅರಿವಾಗುವುದು ಅವನಿಗೆ ಮಾತ್ರ. ಬ್ಯಾಂಕ್ ಉದ್ಯೋಗಿಗಳು ಮತ್ತು ಬ್ಯಾಂಕಿನಿಂದ ಸೇವೆ ಪಡೆಯುವವರು, ಅದರೊಂದಿಗೆ ನಾನಾ ಬಗೆಯ ವ್ಯವಹಾರ ನಡೆಸಬಲ್ಲವರು—ಇವರಲ್ಲದೆ ಬೇರೆ ಯಾರು ತಾನೇ ಇದರ ಸಮಸ್ಯೆಗಳನ್ನೂ ಸ್ವರೂಪವನ್ನೂ ಇವರಿಗಿಂತ ಚೆನ್ನಾಗಿ ಅರಿಯುವುದು ಸಾಧ್ಯ?

'ಬ್ಯಾಂಕಿಂಗ್ ಪ್ರಪಂಚ'ಕ್ಕಾಗಿ ಲೇಖನ ಬರೆಯಲು ಎರಡು ಬಗೆಯ ಸಾಮರ್ಥ್ಯಗಳಿರಬೇಕು. ಮೊದಲನೆಯದಾಗಿ, ಬ್ಯಾಂಕಿಂಗಿನ ಒಳಹೊರಗುಗಳೂ ಅದರ ನಾನಾ ಮುಖಗಳೂ ಚೆನ್ನಾಗಿ ಗೊತ್ತಿರಬೇಕು. ಕೇವಲ ತಾತ್ತ್ವಿಕ ಜ್ಞಾನ ಇದ್ದರೆ ಸಾಲದು, ಆಚರಣೆಯನ್ನು ಆಧರಿಸಿದ ಅನುಭವವೂ ಇರಬೇಕು. ಎರಡನೆಯದಾಗಿ, ಇದನ್ನು ಅಭಿವ್ಯಕ್ತಿಸುವ ಸಾಮರ್ಥ್ಯವೂ ಇರಬೇಕು. ಭಾಷಾಜ್ಞಾನವಿರಬೇಕು. ಭಾಷೆಯನ್ನು ಇದಕ್ಕೆ ಒಗ್ಗಿಸಿಕೊಳ್ಳಬೇಕು. ಇದಕ್ಕೆ ಅಗತ್ಯವಾದ ಪರಿಭಾಷೆಯನ್ನು ಸೃಷ್ಟಿಸಬೇಕು.

## ಕನ್ನಡದ ಪ್ರಾಮುಖ್ಯ

ಇದನ್ನೆಲ್ಲ ಯಾವ ಭಾಷೆಯಲ್ಲಿ ಸಾಧಿಸಬೇಕು ? ಕರ್ನಾಟಕದಲ್ಲಿ ಕನ್ನಡವಲ್ಲದೆ ಬೇರೆ ಯಾವ ಭಾಷೆ ? ಕರ್ನಾಟಕದ ಅಧಿಕೃತ ಭಾಷೆ, ಪರಿಸರದ ಭಾಷೆ, ಕನ್ನಡವೇ. ಕರ್ನಾಟಕದಲ್ಲಿ—ಇತರ ರಾಜ್ಯಗಳಲ್ಲಿರುವಂತೆ—ಇಲ್ಲಿಯ ಅಧಿಕೃತ ಭಾಷೆ ಅಥವಾ ಪರಿಸರದ ಭಾಷೆಯಲ್ಲದೆ ಇತರ ಭಾಷೆಗಳನ್ನಾಡುವವರೂ ಇರಬಹುದು. ತಮ್ಮ ಮಾತೃಭಾಷೆ ಕನ್ನಡವಲ್ಲ ಎನ್ನುವವರು ಇಲ್ಲಿರಬಹುದು—ತಮಿಳುನಾಡಿನಲ್ಲಿ ತಮಿಳೇ ಮಾತೃಭಾಷೆ ಆಗಿಲ್ಲದಿರುವವರೂ, ಮಹಾರಾಷ್ಟ್ರದಲ್ಲಿ ಮರಾಠಿ ತಾಯಿನುಡಿ ಆಗಿರದಿರುವವರೂ ಇರುವಂತೆ. ಆದರೆ ಕನ್ನಡ ಮಾತೃಭಾಷೆ ಆಗಿರದವರೂ ಮನೆಯಿಂದ ಹೊರಬಿದ್ದ ಕೂಡಲೆ —ಅಥವಾ ತಮ್ಮ ಸೀಮಿತ ಪರಿಧಿಯನ್ನು ದಾಟಿದ ಕೂಡಲೆ—ಅವರ ಕಿವಿಗೆ ಸಾಮಾನ್ಯವಾಗಿ ಬೀಳುವ ಭಾಷೆ ಕನ್ನಡವೇ. ಇದು ಪರಿಸರದ ಭಾಷೆ. ಅಂಗಡಿ ಮುಂಗಟ್ಟುಗಳಲ್ಲಿ, ಮಾರುಕಟ್ಟೆಯಲ್ಲಿ, ಬಸ್ಸು ರೈಲುಗಳಲ್ಲಿ ಯಾವ ಭಾಷೆ ಕೇಳಿಬರುವುದೋ, ಯಾವ ಭಾಷೆಯನ್ನು ಎಲ್ಲರೂ ಸಾಮಾನ್ಯವಾಗಿ ತಮ್ಮ ವ್ಯವಹಾರಗಳಿಗೆ ಬಳಸುತ್ತಾರೋ, ಆ ಭಾಷೆಯಲ್ಲಿ ಬ್ಯಾಂಕುಗಳೂ ವ್ಯವಹಾರ ನಡಸುವುದು ಸಹಜ ಹಾಗೂ ಸಾಧು ಎಂಬುದರಲ್ಲಿ ಸಂದೇಹ ಇರಬಾರದು, ಇರಲಾರದು. ಆದ್ದರಿಂದ ಕರ್ನಾಟಕದಲ್ಲಿ ಬ್ಯಾಂಕಿಂಗಿನ ಭಾಷೆ ಕನ್ನಡವಲ್ಲದೆ ಬೇರೆ ಯಾವುದು ತಾನೇ ಆದೀತು ?

## ಬ್ಯಾಂಕಿಂಗ್ ಸಾಹಿತ್ಯ ಸೃಷ್ಟಿ

'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಲೇಖನ ಬರೆಯುವವರ ಪಡೆಯೊಂದನ್ನು ಸೃಷ್ಟಿಮಾಡುವುದರ ಜೊತೆಗೆ ಬ್ಯಾಂಕಿಂಗ್ ಸಾಹಿತ್ಯ ಸೃಷ್ಟಿಯನ್ನೂ ಪರಿಭಾಷೆಯ ನಿರ್ಮಾಣವನ್ನೂ ವ್ಯವಸ್ಥಿತವಾಗಿ ಕೈಗೊಳ್ಳುವುದರ ಅಗತ್ಯ ನಮಗೆ ಕಂಡುಬಂತು. ಬ್ಯಾಂಕಿಂಗ್ ಕಮ್ಮಟವನ್ನು ಏರ್ಪಡಿಸಿದ್ದು ಈ ಅಗತ್ಯದ ಪೂರೈಕೆಗಾಗಿಯೇ. ಬ್ಯಾಂಕುಗಳಲ್ಲಿ ಉದ್ಯೋಗನಿರತರಾದವರು, ಬ್ಯಾಂಕಿಂಗಿನಲ್ಲಿ ಆಸಕ್ತಿ ಇರುವವರು, ಯಾರಾದರೂ, ಈ ಕಮ್ಮಟದಲ್ಲಿ ಭಾಗವಹಿಸಲು ಅವಕಾಶ ಇರಬೇಕು ಎಂದು ಆಲೋಚಿಸಲಾಯಿತು. ಕಮ್ಮಟವನ್ನು ಯಾವಾಗಲೋ ಒಮ್ಮೆ ಏರ್ಪಡಿಸಿದರೆ ಸಾಲದು. ಇದನ್ನು ಆಗಿಂದಾಗ್ಗೆ, ರಾಜ್ಯದ ಬೇರೆಬೇರೆಡೆಗಳಲ್ಲಿ, ಏರ್ಪಡಿಸಬೇಕೆಂದೂ ಯೋಚಿಸಲಾಯಿತು. ಅಂತೆಯೇ ಸಾಮಾನ್ಯವಾಗಿ ಪ್ರತಿ ಆರು ತಿಂಗಳುಗಳಿಗೆ ಒಂದರಂತೆ, ಒಂದೊಂದು ಸಾರಿ ಒಂದೊಂದು ಜಿಲ್ಲೆಯ ಪ್ರಮುಖ ಸ್ಥಳವೊಂದರಲ್ಲಿ, ಕಮ್ಮಟ ಏರ್ಪಡಿಸುತ್ತ ಬರಲಾಗುತ್ತಿದೆ. ಮೊದಲನೆಯ ಕಮ್ಮಟ ನಡೆದದ್ದು ಮೈಸೂರಿನಲ್ಲಿ. ಎರಡನೆಯದು ಮಂಡ್ಯ ಜಿಲ್ಲೆಯ ಶಿವನಸಮುದ್ರದಲ್ಲಿ. ಹೀಗೆಯೇ ಇದುವರೆಗೆ ಬೆಂಗಳೂರು ಮತ್ತು ಗುಲ್ಬರ್ಗ ಜಿಲ್ಲೆಗಳನ್ನು ಬಿಟ್ಟು ಉಳಿದೆಲ್ಲ ಜಿಲ್ಲೆಗಳಲ್ಲೂ ಕಮ್ಮಟಗಳನ್ನು ಏರ್ಪಡಿಸಲಾಗಿದೆ. ಬೇರೆಬೇರೆ ಜಿಲ್ಲೆಗಳಲ್ಲಿ ಕಮ್ಮಟಗಳನ್ನು ಏರ್ಪಡಿಸುವುದರ ಉದ್ದೇಶಗಳೆಂದರೆ, ಆ ಜಿಲ್ಲೆಗಳ ಜನಕ್ಕೆ ನಮ್ಮ ಕೆಲಸದ ಪರಿಚಯ ಮಾಡಿಕೊಡುವುದು, ಅಲ್ಲಿಯ ಜನಜೀವನ ಹಾಗೂ ಆರ್ಥಿಕ ಸಮಸ್ಯೆಗಳನ್ನು ಅರಿತುಕೊಳ್ಳುವುದು ಮತ್ತು ಅಲ್ಲಿಯ ಭಾಷಾ ವೈಶಿಷ್ಟ್ಯವನ್ನು ತಿಳಿದುಕೊಳ್ಳುವುದು.

## ಉದ್ದೇಶ, ಸ್ವರೂಪ

ಕಮ್ಮಟ ಯಾವ ಜಿಲ್ಲೆಯಲ್ಲಿ ನಡೆಯುವುದೋ ಆ ಜಿಲ್ಲೆಯಲ್ಲಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ತೊಡಗಿರುವವರೇ ಅದರಲ್ಲಿ ಭಾಗವಹಿಸಬೇಕೆಂದೇನೂ ಇಲ್ಲ. ಭಾರತೀಯ ಸ್ಟೇಟ್ ಬ್ಯಾಂಕಿಗಷ್ಟೇ ಇದು ಸೀಮಿತವಾಗಿರಬಾರದೆಂಬುದೂ ನಮ್ಮ ಉದ್ದೇಶ. ಎಲ್ಲ ಬ್ಯಾಂಕುಗಳವರಿಗೂ ಸಂಬಂಧಿಸಿದ ಕೆಲಸ ಇದು. ಆದ್ದರಿಂದ ಕಮ್ಮಟದಲ್ಲಿ ವಿವಿಧ ಬ್ಯಾಂಕುಗಳ ಉದ್ಯೋಗಿಗಳು ಪಾಲ್ಗೊಳ್ಳುತ್ತ ಬಂದಿದ್ದಾರೆ. ಬ್ಯಾಂಕಿಂಗ್ ಕಮ್ಮಟ ಆರಂಭವಾದದ್ದು ಸಂಪೂರ್ಣವಾಗಿ ಕೆಲವು ಆಸಕ್ತರ ಸ್ವಪ್ರೇರಣೆಯಿಂದ. ಇದು ನಡೆಯುತ್ತ ಬರುತ್ತಿರುವುದು ಸಮನ್ವಯ ಸಮಿತಿಯ ಆಶ್ರಯದಲ್ಲಿ. ಇದಕ್ಕೆ ಬ್ಯಾಂಕುಗಳು ಈಗ ಅಧಿಕೃತವಾಗಿ ತಮ್ಮ ಉದ್ಯೋಗಿಗಳನ್ನು ಕಳುಹಿಸುತ್ತಿವೆ. ಈ ಅಧಿಕೃತ ಕಮ್ಮಟಿಗರ ಜೊತೆಗೆ ಹಲವರು ಸ್ವಂತ ಇಚ್ಛೆಯಿಂದ ಬರುತ್ತಿದ್ದಾರೆ. ಕೆಲವರು ಪ್ರತಿಯೊಂದು ಕಮ್ಮಟದಲ್ಲೂ ಭಾಗವಹಿಸುತ್ತ ಬಂದಿದ್ದಾರೆ.

ಪ್ರತಿಯೊಂದು ಕಮ್ಮಟದ ಅವಧಿ ಸಾಮಾನ್ಯವಾಗಿ ಆರು ದಿನ. ಅಧಿಕೃತ ಅಭ್ಯರ್ಥಿಗಳಲ್ಲದೆ ಖಾಸಗಿಯಾಗಿ ಪಾಲ್ಗೊಳ್ಳುವವರೂ ಇರುವುದರಿಂದ, ಹೆಚ್ಚು ರಜಾದಿನಗಳು ಕೂಡಿಬಂದಾಗ ಕಮ್ಮಟವನ್ನು ಏರ್ಪಡಿಸುವುದು

ಅನಿವಾರ್ಯವಾಗಿದೆ. ಪ್ರತಿಯೊಂದು ಕಮ್ಮಟದ ಮುಖ್ಯ ಕಾರ್ಯಭಾರಗಳೆಂದರೆ ಪ್ರಬಂಧಗಳ ಮಂಡನೆ ಮತ್ತು ಅನುವಾದ. ಕಮ್ಮಟದಲ್ಲಿ ಭಾಗವಹಿಸುವ ಪ್ರತಿಯೊಬ್ಬರೂ ಹಣ ಅಥವಾ ಬ್ಯಾಂಕಿಂಗಿಗೆ ಸಂಬಂಧಿಸಿದ ಯಾವುದಾದರೊಂದು ವಿಷಯವನ್ನು ಕುರಿತು ಕನ್ನಡದಲ್ಲಿ ಒಂದು ಪ್ರಬಂಧವನ್ನು ಬರೆದು ತರಬೇಕು. ಜೊತೆಗೆ ಕಮ್ಮಟದ ಕಾರ್ಯಕರ್ತರು ಸೂಚಿಸಿದ ಇಂಗ್ಲಿಷ್ ಲೇಖನವೊಂದರ ನಿರ್ದಿಷ್ಟ ಭಾಗವನ್ನು ಅನುವಾದ ಮಾಡಿಕೊಂಡು ಬರಬೇಕು. ಪ್ರತಿಯೊಬ್ಬರೂ ತಮ್ಮ ಪ್ರಬಂಧವನ್ನು ಕಮ್ಮಟದಲ್ಲಿ ಮಂಡಿಸುತ್ತಾರೆ. ಆಮೇಲೆ ಕಮ್ಮಟದಲ್ಲಿ ಭಾಗವಹಿಸುವ ಪ್ರತಿಯೊಬ್ಬರೂ ಆ ಪ್ರಬಂಧವನ್ನು ವಿಮರ್ಶಿಸುತ್ತಾರೆ. ಇವರ ಪೈಕಿ ಒಬ್ಬರು ಪ್ರಧಾನ ವಿಮರ್ಶಕರು. ಪ್ರಧಾನ ವಿಮರ್ಶಕರು ತಮ್ಮ ವಿಮರ್ಶೆ ನೀಡಿದ ಮೇಲೆ ಇತರರು ತಂತಮ್ಮ ಅನಿಸಿಕೆಗಳನ್ನು ತಿಳಿಸುತ್ತಾರೆ. ವಿಷಯ, ಭಾಷೆ–ಈ ಎರಡೂ ದೃಷ್ಟಿಗಳಿಂದ ಪ್ರಬಂಧವನ್ನು ವಿಮರ್ಶಿಸಲಾಗುತ್ತದೆ. ಪ್ರಬಂಧದಲ್ಲಿ ಬಂದಿರುವ ಪಾರಿಭಾಷಿಕ ಪದಗಳ ಮೇಲೂ ಚರ್ಚೆ ನಡೆಯುತ್ತದೆ. ಈ ಎಲ್ಲ ಅಂಶಗಳನ್ನೂ ಗಮನದಲ್ಲಿಟ್ಟು ಪ್ರಬಂಧಕಾರರು ಅನಂತರ ತಮ್ಮ ಪ್ರಬಂಧವನ್ನು ಪರಿಷ್ಕರಿಸಿ ಕೊಡುತ್ತಾರೆ. ಪ್ರಬಂಧ ಪ್ರಕಟಣೆಗೆ ಯೋಗ್ಯವಾಗಿದೆಯೆನಿಸಿದರೆ ಅದು 'ಬ್ಯಾಂಕಿಂಗ್ ಪ್ರಪಂಚ'ದ ಮುಂದಿನ ಸಂಚಿಕೆಯೊಂದರಲ್ಲಿ ಪ್ರಕಟವಾಗುತ್ತದೆ.

ಕಮ್ಮಟಿಗರು ಮಾಡಿರುವ ಭಾಷಾಂತರವನ್ನೂ ಕಮ್ಮಟದಲ್ಲಿ ಪರಿಶೀಲಿಸಲಾಗುತ್ತದೆ. ಇಂಗ್ಲಿಷ್ ಮೂಲದ ಪ್ರತಿಯೊಂದು ವಾಕ್ಯವನ್ನೂ ಓದಿ, ಭಾಷಾಂತರವನ್ನೂ ಓದಿ ಚರ್ಚಿಸಿ ಅದನ್ನು ಪರಿಷ್ಕರಿಸಲಾಗುತ್ತದೆ. ಬ್ಯಾಂಕಿಂಗ್ ಕುರಿತ ಯಾವುದೇ ವಿಷಯವನ್ನು ಇಂಗ್ಲಿಷಿನಲ್ಲಿ ಹೇಗೆ ಅಭಿವ್ಯಕ್ತಿಸಲಾಗಿದೆ, ಅದನ್ನು ಅಷ್ಟೇ ಸಮರ್ಪಕವಾಗಿ ಕನ್ನಡದಲ್ಲಿ ತರುವುದು ಹೇಗೆ, ಅಲ್ಲಿ ಬಳಸಲಾಗಿರುವ ಪಾರಿಭಾಷಿಕ ಪದಗಳಿಗೆ ಸಂವಾದಿಯಾಗಿ ಕನ್ನಡದಲ್ಲಿ ಯಾವ ಪದಗಳನ್ನು ಬಳಸಬೇಕು ಎಂಬುದರ ಅರಿವು ಕಮ್ಮಟಿಗರಿಗೆ ಉಂಟಾಗುತ್ತದೆ. ಜೊತೆಗೆ ಹೊಸ ಹೊಸ ವಿಚಾರಗಳನ್ನು ಅಭಿವ್ಯಕ್ತಿಸಲು ಕನ್ನಡ ಭಾಷೆಯನ್ನು ಹೊಂದಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಹೀಗೆ ಸಾಮೂಹಿಕವಾಗಿ ಭಾಷಾಂತರಿಸಲಾದ ಲೇಖನವನ್ನೂ ಬ್ಯಾಂಕಿಂಗ್ ಪ್ರಪಂಚದಲ್ಲಿ ಪ್ರಕಟಿಸಲಾಗುತ್ತದೆ.

ಬ್ಯಾಂಕಿಂಗ್ ಕಮ್ಮಟ ತನ್ನ ಮುಂದೆ ಇಟ್ಟುಕೊಂಡ ಗುರಿಗಳು ಹಲವಾರು. ಮೊದಲನೆಯದಾಗಿ, ಬ್ಯಾಂಕಿಂಗ್ ಕುರಿತ ಲೇಖಕರ ಪಡೆಯೊಂದರ ಸೃಷ್ಟಿಯಾಗಿದೆ. 'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಅಗತ್ಯವಾದ ಲೇಖನಗಳ ಪೂರೈಕೆ ಆಗುತ್ತಿದೆ. ಕನ್ನಡದಲ್ಲಿ ಬ್ಯಾಂಕಿಂಗ್ ಸಾಹಿತ್ಯದ ಸೃಷ್ಟಿಯಾಗುತ್ತಿದೆ. ಇಂಗ್ಲಿಷಿನಲ್ಲಿ ಅಭಿವ್ಯಕ್ತಿಸಬಹುದಾದ ಯಾವುದೇ ವಿಷಯವನ್ನು ಕನ್ನಡದಲ್ಲೂ ಅಷ್ಟೇ ಸಮರ್ಥವಾಗಿ ಅಭಿವ್ಯಕ್ತಿಸಬಹುದು ಎಂಬುದನ್ನು ಅದು ಸಿದ್ಧಮಾಡಿ ತೋರಿಸಿಕೊಡುತ್ತದೆ. ಭಾಷೆಗೆ ಹೊಸ ಆಯಾಮವೊಂದನ್ನು ದೊರಕಿಸಿ ಕೊಡುತ್ತದೆ. ಬ್ಯಾಂಕಿಂಗ್ ಕುರಿತ ಪಾರಿಭಾಷಿಕ ಪದಗಳನ್ನು ಟಂಕಿಸುವುದು ಸಾಧ್ಯವಾಗುತ್ತದೆ. ಈಗಾಗಲೇ ಬಳಕೆಯಲ್ಲಿರುವ ಪದಗಳ ಅರ್ಥವನ್ನು ನಿಷ್ಕೃಷ್ಟವಾಗಿ ನಿರ್ಧರಿಸಲಾಗುತ್ತದೆ.

ಇವೆಲ್ಲದರ ಜೊತೆಗೆ, ಬ್ಯಾಂಕುಗಳಲ್ಲಿ ಕನ್ನಡವನ್ನು ಬಳಸುವುದು ಸಾಧ್ಯವಷ್ಟೇ ಅಲ್ಲ, ಅದು ಅಗತ್ಯ, ಅನಿವಾರ್ಯ ಎಂಬುದು ಭಾಗಿಗಳಿಗೆ ಮನವರಿಕೆಯಾಗುತ್ತದೆ. ಇದೂ ಒಂದು ಮುಖ್ಯವಾದ ಸಾಧನೆ. ಇಂದಲ್ಲ ನಾಳೆ ಬ್ಯಾಂಕುಗಳಲ್ಲಿ ಎಲ್ಲ ಹಂತಗಳಲ್ಲೂ ಕನ್ನಡವನ್ನು ಬಳಸಬೇಕಾಗಿ ಬಂದಾಗ, ಅದಕ್ಕೆ ಅಗತ್ಯವಾದ ಎಲ್ಲ ಸಾಮಗ್ರಿಯೂ ಕನ್ನಡದಲ್ಲಿ ಲಭ್ಯವಿರುವುದಲ್ಲದೆ ಅದನ್ನು ನಿರ್ವಹಿಸಬಲ್ಲವರ ಪಡೆಯೂ ಸಿದ್ಧವಾಗಿರುತ್ತದೆ. ಬ್ಯಾಂಕ್ ವ್ಯವಹಾರಕ್ಕೆ ಕನ್ನಡ ಅಣಿಗೊಂಡಿಲ್ಲ ಎಂದು ಯಾರೂ ಹೇಳುವಂತಿರುವುದಿಲ್ಲ.

## ವಿಶಿಷ್ಟ ತರಬೇತಿ

ಬ್ಯಾಂಕಿಂಗ್ ಕಮ್ಮಟ ಕೇವಲ ಕನ್ನಡ ತರಬೇತಿ ಕಾರ್ಯಕ್ರಮ, ಬ್ಯಾಂಕುಗಳಲ್ಲಿ ಕನ್ನಡ ಬಳಸುವ ಬಗ್ಗೆ ಪ್ರಚಾರ—ಎಂದು ಅನೇಕರು ಅಂದುಕೊಳ್ಳುವುದುಂಟು. ಬ್ಯಾಂಕುಗಳಲ್ಲಿ ಕನ್ನಡ ಬಳಕೆಗೆ ಬರಬೇಕು ಎಂಬುದು ಆಶಯವಾದರೂ ಇದನ್ನು ಬರೀ ಪ್ರಚಾರದ ಮೂಲಕವೇ ಸಾಧಿಸುವುದು ಉದ್ದೇಶವಲ್ಲ. ಅದರ ಬಳಕೆ ಸಾಧ್ಯವಾಗುವಂತೆ ಅದಕ್ಕೆ ಅಗತ್ಯವಾದ ಭೂಮಿಕೆಯನ್ನು ಸೃಷ್ಟಿಸುವುದು ಉದ್ದೇಶ. ಯಾವುದೇ ಅಭಿಪ್ರಾಯವನ್ನು ಇತರರ ಮೇಲೆ ಹೇರುವ ಪ್ರಶ್ನೆಯೂ ಇಲ್ಲ. ಬ್ಯಾಂಕಿಂಗ್ ಕಮ್ಮಟದಲ್ಲಿ ಪ್ರಬಂಧ ಮಂಡನೆಗಾಗಿ, ಅನುವಾದಕ್ಕಾಗಿ, ಚರ್ಚೆಗಾಗಿ ಎತ್ತಿಕೊಳ್ಳುವ ವಿಷಯಗಳು ಬ್ಯಾಂಕಿಂಗಿಗೆ ಸಂಬಂಧಿಸಿದಂಥವೇ. ಬ್ಯಾಂಕಿಂಗಿನ ವಿವಿಧ ಚಟುವಟಿಕೆಗಳ ಕ್ಷೇತ್ರಗಳಿಗೆ ಸಂಬಂಧಿಸಿದ ಸಮಸ್ಯೆಗಳು, ಹೊಸ ಬೆಳವಣಿಗೆಗಳು ಮುಂತಾದವನ್ನು ಕುರಿತು ಸಾಮಾನ್ಯವಾಗಿ ಆಯಾ ಕ್ಷೇತ್ರಗಳಲ್ಲಿ ಕಾರ್ಯನಿರತರಾದರು, ಅವುಗಳಲ್ಲಿ ಆಸಕ್ತರಾದವರು ಅಧ್ಯಯನಪೂರ್ಣವಾದ ಪ್ರಬಂಧಗಳನ್ನು ಮಂಡಿಸುತ್ತಾರೆ. ಆ ವಿಷಯಗಳಲ್ಲಿ ಅಷ್ಟೇ ಸಮರ್ಥರಾದವರು, ಆಸಕ್ತರಾದವರು ಅವನ್ನು ವಿಮರ್ಶಿಸುತ್ತಾರೆ. ಭಾಷಾಂತರಕ್ಕೆ ಆರಿಸಿಕೊಳ್ಳುವ ಲೇಖನಗಳೂ ಅಂಥವೇ. ಹೀಗಾಗಿ, ಇದು ವಾಸ್ತವವಾಗಿ ಬ್ಯಾಂಕಿಂಗನ್ನು ಕುರಿತ ನಾನಾ ಮುಖಗಳ, ಪ್ರವೃತ್ತಿಗಳ ಪರಿಚಯ, ವಿವೇಚನೆ, ವಿಮರ್ಶೆ ಆಗಿರುತ್ತದೆ. ಬ್ಯಾಂಕುಗಳ ಸಿಬ್ಬಂದಿ ತರಬೇತಿ ಕೇಂದ್ರಗಳಲ್ಲಿ ನಡೆಯುವಂಥ ಕೆಲಸವೇ ಇಲ್ಲೂ ನಡೆಯುತ್ತದೆ. ಆದರೆ ಇಲ್ಲಿ ವಿಷಯದ, ವಿಚಾರದ ಹರಿವು ಏಕಮುಖವಲ್ಲ, ಬಹುಮುಖ. ಕಮ್ಮಟಿಗರೆಲ್ಲ ಇದರಲ್ಲಿ ಭಾಗವಹಿಸುತ್ತಾರೆ. ಪ್ರಬಂಧಕಾರರು ಮಂಡಿಸಿದ ವಿಷಯ ಚಕ್ರಾಕಾರವಾಗಿ ಕಮ್ಮಟಿಗರ ಮೂಲಕ ಹರಿಯುತ್ತದೆ. ಇಲ್ಲಿ ಯಾರೇ ಒಬ್ಬರು ಬೋಧಕರಲ್ಲ. ಪ್ರತಿಯೊಬ್ಬರೂ ಇತರರಿಗೆ ತಿಳಿಸುತ್ತಾರೆ, ಇತರರಿಂದ ತಿಳಿಯುತ್ತಾರೆ. ಒಂದು ರೀತಿಯಲ್ಲಿ ಇದು ವಿಷಯಚಕ್ರಪ್ರವರ್ತನ ಅಥವಾ ವಿಚಾರಚಕ್ರಪ್ರವರ್ತನ. ಇತ್ತೀಚಿನ ಪ್ರವೃತ್ತಿಗಳೂ ಪರಿಕಲ್ಪನೆಗಳೂ ಸಮಸ್ಯೆಗಳೂ ಇಲ್ಲಿ ಚರ್ಚಿತವಾಗುವುದರಿಂದ ಇದು ಅನನ್ಯವಾದ ರೀತಿಯ ತರಬೇತಿಯಾಗಿ ಪರಿಣಮಿಸಿದೆ. ಇಲ್ಲಿ ಏಕತಾನತೆಯಿಲ್ಲ. ಆದ್ದರಿಂದ ಬೇಸರ ಉಂಟಾಗದು. ಸಮಾನತೆಯ ತಳಹದಿಯ ಮೇಲೆ ಎಲ್ಲ ಕಲಾಪವೂ ನಡೆಯುವುದರಿಂದ, ಎಲ್ಲವೂ ಅನೌಪಚಾರಿಕವಾದ್ದರಿಂದ ಇಲ್ಲಿಯ ಕಲಿಕೆ ಹಾಗೂ ಕಲಿಸುವಿಕೆ ವೇದನಾರಹಿತ — learning without tears. ಇಲ್ಲಿ ನಡೆಯುವುದು ಸ್ವಯಂವಿಮರ್ಶೆ; ಸದ್ದಿಲ್ಲದ ಬೆಳವಣಿಗೆ. 'ಸತ್ಯಂ ಬ್ರೂಯಾತ್, ಪ್ರಿಯಂ ಬ್ರೂಯಾತ್' ಎಂಬುದು ಇಲ್ಲಿಯ ಕ್ರಮ. ಇನ್ನೊಬ್ಬರ ಮನಸ್ಸು ನೋಯುವುದೆಂದು ಯಾರೂ ಸತ್ಯವನ್ನು ಮರೆಮಾಚಬೇಕಾದ್ದಿಲ್ಲ. ಆದರೆ ಪ್ರಿಯವಾಗುವ ರೀತಿಯಲ್ಲಿ ಸತ್ಯವನ್ನು ನುಡಿಯುವ ಪ್ರಯೋಗ ಇಲ್ಲಿ ನಡೆಯುತ್ತದೆ. ಆತ್ಮನಿಷ್ಠೆಗಿಂತ ವಸ್ತುನಿಷ್ಠೆಯೇ ಗುರಿಯಾದಾಗ ಯಾರು ಯಾರನ್ನೂ ನೋಯಿಸುವ ಪ್ರಶ್ನೆಯೇ ಬರುವುದಿಲ್ಲ. ಇತರರ ವಿಮರ್ಶೆಯನ್ನು ಹೇಗೆ ತೆಗೆದುಕೊಳ್ಳಬೇಕು ಎಂಬುದೂ ಅಭ್ಯಾಸವಾಗುತ್ತದೆ. ಒಟ್ಟಿನಲ್ಲಿ ಇದೊಂದು ಆದರ್ಶಯುತವಾದ, ವಿಶಿಷ್ಟವಾದ, ತರಬೇತಿಯೆಂದು ಹೇಳಿಕೊಳ್ಳದ, ತರಬೇತಿ ಕೇಂದ್ರ. ಈ ಕಾರಣದಿಂದಾಗಿಯೂ ಈ ಕಮ್ಮಟಗಳು ಹೆಚ್ಚು ಪ್ರಿಯವಾಗಿ ಪರಿಣಮಿಸಿವೆ. ಹಲವರು ಪ್ರತಿ ಕಮ್ಮಟಕ್ಕೂ ತಪ್ಪದೆ ಹಾಜರಾಗುವುದು ಇದರಿಂದಾಗಿ. ಈ ಕಮ್ಮಟಗಳಿಗೆ ವಿಷಯದ ದಾಸ್ತಾನಿನ ಕೊರತೆಯಿಲ್ಲ. ಸುಸಂಸ್ಕೃತ ಸರಸವಿನೋದಗಳ ಒರತೆ ಬತ್ತುವುದೇ ಇಲ್ಲ. ಇವೆಲ್ಲವುಗಳ ಜೊತೆಗೆ ತಜ್ಞರ ಉಪನ್ಯಾಸಗಳೂ ವಿಚಾರಸಂಕಿರಣಗಳೂ ಕಮ್ಮಟಗಳನ್ನು ವೈವಿಧ್ಯಮಯವಾಗಿ ಮಾಡಿವೆ, ಅವುಗಳ ಉಪಯುಕ್ತತೆಯನ್ನು ಇನ್ನಷ್ಟು ಹೆಚ್ಚಿಸಿವೆ.

ಕಮ್ಮಟದ ಆರು ದಿನಗಳಲ್ಲಿ ಸಾಮಾನ್ಯವಾಗಿ ಪ್ರತಿದಿನವೂ ಎರಡು ಅಧಿವೇಶನಗಳಿರುತ್ತವೆ. ಪ್ರತಿಯೊಂದು ಅಧಿವೇಶನದ ಅವಧಿ ನಾಲ್ಕು ಗಂಟೆ. ಭೋಜನಕ್ಕೆ ಮೊದಲು ಒಂದು ಅಧಿವೇಶನವಾದರೆ ಭೋಜನಾನಂತರ ಇನ್ನೊಂದು. ಅಗತ್ಯವೆನಿಸಿದರೆ ಕಮ್ಮಟಿಗರೇ, ಸ್ವಸಂತೋಷದಿಂದ, ನಿಗದಿಯಾದ ಅವಧಿಗಿಂತ ಹೆಚ್ಚು ಕಾಲ ಕೂರಬಹುದು. ಅನೇಕ ಸಾರಿ ಬೆಳಗ್ಗೆ ಗೊತ್ತಾದ ಕಾಲಕ್ಕಿಂತ ಮೊದಲೇ ಕಮ್ಮಟ ಆರಂಭವಾದದ್ದುಂಟು. ಸಂಜೆ ಅಧಿಕೃತ ಅವಧಿ ಮುಗಿದ ಮೇಲೂ ಮುಂದುವರಿದದ್ದುಂಟು. ಕಾರ್ಯಕ್ರಮವನ್ನು ಮುಗಿಸಿಯೇ ತೀರಬೇಕು ಎಂಬ ಹಠದಿಂದ ರಾತ್ರಿ ಸರಿಹೊತ್ತಿನವರೆಗೂ ಕಮ್ಮಟ ಮುಂದುವರಿದ ಸಂದರ್ಭಗಳೂ ಇಲ್ಲದಿಲ್ಲ. ಕಮ್ಮಟ ಮುಗಿದ ಮೇಲೂ ಕಮ್ಮಟಿಗರು

ತಂತಮ್ಮ ಬಿಡಾರಗಳಲ್ಲಿ ಬಿಸಿಯಾದ ಚರ್ಚೆಗಳಲ್ಲಿ ನಿರತರಾಗುವುದೂ, ಇಡೀ ರಾತ್ರಿ ಕುಳಿತು ಪ್ರಬಂಧ ಸಿದ್ಧಪಡಿಸುವುದೂ ಅಪುರೂಪವೇನಲ್ಲ.

## ಉಪಾಂಗಗಳು

ಕಮ್ಮಟದ ಇನ್ನೊಂದು ವೈಶಿಷ್ಟ್ಯವೆಂದರೆ, ಇದರ ಅಂಗವಾಗಿ ಹಮ್ಮಿಕೊಳ್ಳುವ ಇತರ ಕಾರ್ಯಕ್ರಮಗಳು. ಸಾಮಾನ್ಯವಾಗಿ ಪ್ರತಿದಿನವೂ ಕಮ್ಮಟ ಮುಗಿದ ಮೇಲೆ ಕವಿಗೋಷ್ಠಿಯನ್ನೋ, ರಸಪ್ರಶ್ನೆಯನ್ನೋ, ಆಶುಭಾಷಣ ಸ್ಪರ್ಧೆಯನ್ನೋ ಏರ್ಪಡಿಸುವುದುಂಟು. ಒಂದೊಂದು ದಿನ ಇಂಥ ಒಂದೊಂದು ಕಾರ್ಯಕ್ರಮ ಇರುತ್ತದೆ. ಯಾವುದೇ ಶಾಸ್ತ್ರ ವಿಷಯವನ್ನು ಕುರಿತು ಬರೆಯುವುದರಲ್ಲಿ ಕಲೆಯೇನೂ ಇಲ್ಲ ಎಂದು ಅನೇಕರು ಭಾವಿಸುವುದುಂಟು. ಇಂಥ ಭಾವನೆ ತಪ್ಪು. ಸಾಹಿತ್ಯವನ್ನು ಸೃಜನಾತ್ಮಕ, ಸೃಜನೇತರ ಎಂದು ವಿಂಗಡಿಸುವುದು ಎಷ್ಟರ ಮಟ್ಟಿಗೆ ಸಾಧು, ಸಾಧ್ಯ ಎಂಬುದು ಉತ್ತರಿಸಲಾಗದ ಪ್ರಶ್ನೆ. ಇವೆರಡರ ನಡುವಣ ಗೆರೆ ಬಲು ತೆಳುವಾದ್ದು. ಇದು ಆಚೀಚೆ ಜಾರುತ್ತಲೇ ಇರುತ್ತದೆ. ಬಹುಶಃ ಇಂಗ್ಲಿಷಿನ ಫಿಕ್ಷನ್ ಅಥವಾ ಕ್ರಿಯೇಟಿವ್, ನಾನ್-ಫಿಕ್ಷನ್ ಅಥವಾ ನಾನ್-ಕ್ರಿಯೇಟಿವ್ ಎಂಬ ಪದಗಳಿಂದ ಈ ಪದಗಳು ಬಂದಿರಬಹುದು. ಫಿಕ್ಷನ್ ಅಥವಾ ಕ್ರಿಯೇಟಿವ್ ಸಾಹಿತ್ಯದಲ್ಲಿ ವಸ್ತು ಸಂಪೂರ್ಣವಾಗಿ ಕಲ್ಪಿತ. ಅಲ್ಲಿ ಲೇಖಕನಿಗೆ ಸರ್ವಸ್ವಾತಂತ್ರ್ಯವೂ ಉಂಟು.ನಾನ್-ಫಿಕ್ಷನ್ ಅಥವಾ ಸೃಜನೇತರ ಎನ್ನುವ ಸಾಹಿತ್ಯ ಸಾಮಾನ್ಯವಾಗಿ ವಾಸ್ತವಿಕ ಸಂಗತಿಗಳನ್ನು ಆಧರಿಸಿದ್ದು, ಅಥವಾ ಬೌದ್ಧಿಕವಾದ್ದು; ಆಲೋಚನೆ ಅಥವಾ ಆಲೋಡನೆಯ ಫಲವಾದ್ದು. ಆದ್ದರಿಂದ ಲಭ್ಯವಿರುವ ವಸ್ತುವನ್ನಾಧರಿಸಿ, ಅಥವಾ ಬೌದ್ಧಿಕ ಚಿಂತನೆಯನ್ನು ಕುರಿತು, ಬರೆಯಬೇಕಾದಾಗ, 'ಸೃಜನಾತ್ಮಕ' ಎನ್ನಲಾದ ಸಾಹಿತ್ಯವನ್ನು ರಚಿಸುವವನಿಗೆ ಇರುವ ಸ್ವಾತಂತ್ರ್ಯ ಇರುವುದಿಲ್ಲ. ಆದರೂ ಸೃಜನಾತ್ಮಕ ಸಾಹಿತ್ಯರಚನಕಾರನ ಪದಸಂಪತ್ತಿ, ಶಕ್ತಿಯುತವಾಗಿ ಬರೆಯುವ ಸಾಮರ್ಥ್ಯ, ಆಕರ್ಷಕವಾಗಿ ಅಭಿವ್ಯಕ್ತಿಸುವ ಕಲೆಗಾರಿಕೆ–ಒಟ್ಟಿನಲ್ಲಿ ಪ್ರತಿಭಾ ಸಂಪನ್ನತೆ–ಇಲ್ಲಿಯೂ ಇರಬೇಕಾಗುತ್ತದೆ. ಹಿತಮಿತ ಮಾತುಗಾರಿಕೆ, ಔಚಿತ್ಯಪ್ರಜ್ಞೆ, ಆಕರ್ಷಕ ಶೈಲಿ, ಕೊನೆಯವರೆಗೂ ಕುತೂಹಲವನ್ನು ಉಳಿಸಿ ಬೆಳಸಿಕೊಂಡು ಹೋಗುವ ಕೌಶಲ ಇಲ್ಲಿ ಕೂಡ ಅಗತ್ಯವಾಗುತ್ತದೆ. ಇಲ್ಲಿ ಲೇಖಕನ ಪ್ರತಿಭೆ, ವ್ಯುತ್ಪತ್ತಿ ಬೇರೆ ರೀತಿ ಕೆಲಸ ಮಾಡಬಹುದು ; ಗುರಿ ಬೇರೆ ಇರಬಹುದು. ವಿಷಯದ ಚೌಕಟ್ಟಿನೊಳಗೆ ಸೃಜನಾತ್ಮಕತೆ ಜಾಗರವಾಡಬೇಕಾಗುತ್ತದೆ. ಆದ್ದರಿಂದಲೇ ಶಾಸ್ತ್ರಸಾಹಿತ್ಯವನ್ನು ರಚಿಸುವವನೂ ಸೃಜನಾತ್ಮಕವೆನ್ನಲಾದ ಸಾಹಿತ್ಯದ ಪರಿಚಯ, ಅದನ್ನು ರಚಿಸುವ ಸಾಮರ್ಥ್ಯ ದೊರಕಿಸಿಕೊಳ್ಳಬೇಕು. ಭಾಷೆಯ ಸಾಧ್ಯತೆಗಳನ್ನು ಅರಿಯದವನು ಒಳ್ಳೆಯ ಶಾಸ್ತ್ರಸಾಹಿತ್ಯಲೇಖಕನಾಗಲಾರ. ಈ ಅರಿವನ್ನೂ ಸಾಮರ್ಥ್ಯವನ್ನೂ ದೊರಕಿಸಿಕೊಡುವ ಉದ್ದೇಶದಿಂದ ಕಮ್ಮಟಿಗರಿಗಾಗಿ ಏರ್ಪಡಿಸಲಾಗುತ್ತಿರುವ ಕವಿಗೋಷ್ಠಿ, ಆಶುಭಾಷಣ ಮುಂತಾದ ಕಾರ್ಯಕ್ರಮಗಳು ಅತ್ಯಂತ ಯಶಸ್ವಿಯಾಗಿವೆ. ಕಮ್ಮಟ ನಡೆಯುವ ಊರಿನಲ್ಲಿ ವಾಸಿಸುವ ಕವಿಗಳೂ ಆಸಕ್ತರೂ ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಬಹುದಾಗಿದೆ. ಇದರಿಂದ ಸಾರ್ವಜನಿಕರೊಂದಿಗೆ ಮುಖಾಮುಖಿ,ಸಂವಾದ ಏರ್ಪಟ್ಟು ಸ್ನೇಹವಲಯ ವಿಸ್ತರಿಸುತ್ತದೆ.

ಕಮ್ಮಟದ ನಾಲ್ಕು ಗೋಡೆಗಳಿಂದಾಚೆಗೆ ಕಣ್ಣು ಹಾಯಿಸುವ ಕಾರ್ಯಕ್ರಮಗಳೂ ಇಲ್ಲದಿಲ್ಲ. ಕಮ್ಮಟದ ಬಿಡುವಿಲ್ಲದ ಕಲಾಪಗಳ ನಡುವೆ ಒಂದು ಅರೆದಿನ ಬಿಡುವು ಮಾಡಿಕೊಂಡು –ಎಂದರೆ ಆ ಅರ್ಧ ದಿನದ ಕೆಲಸವನ್ನು ಉಳಿದ ದಿನಗಳಿಗೆ ಹಂಚಿಕೊಂಡು –ಕಮ್ಮಟಿಗರಿಗಾಗಿ ಸುತ್ತಣ ಪ್ರೇಕ್ಷಣೀಯ ಸ್ಥಳಗಳಿಗೆ ಪ್ರವಾಸ ಏರ್ಪಡಿಸಲಾಗುತ್ತದೆ. ವಿವಿಧ ಜಿಲ್ಲೆಗಳಲ್ಲಿ ಕಮ್ಮಟಗಳಲ್ಲಿ ಭಾಗವಹಿಸಿರುವ ಕಮ್ಮಟಿಗರು ಕರ್ನಾಟಕದ ಬಹುತೇಕ ಐತಿಹಾಸಿಕ ಸಾಂಸ್ಕೃತಿಕ ಧಾರ್ಮಿಕ ಸ್ಥಳಗಳನ್ನು ಸಂದರ್ಶಿಸುವುದು ಸಾಧ್ಯವಾಗಿದೆ. ಇದು ಕಮ್ಮಟಿಗರಿಗೆ ಕಮ್ಮಟ ನೀಡುವ ಬೋನಸ್ಸು. ಇದರ ಜೊತೆಗೆ ಆ ಸುತ್ತಿನ ಬ್ಯಾಂಕ್ ಕಛೇರಿಗಳಿಗೆ ಭೇಟಿ ನೀಡಿ, ಅಲ್ಲಿಯ ಉದ್ಯೋಗಿಗಳಿಗೆ ಕಮ್ಮಟದ ಹಾಗೂ ಸಮನ್ವಯ ಸಮಿತಿಯ ಕಲಾಪಗಳ ಪರಿಚಯ ಮಾಡಿಕೊಟ್ಟು, ಕನ್ನಡದ ಬಗ್ಗೆ ಅವರಲ್ಲಿ ಆಸಕ್ತಿ ಮೂಡಿಸುವುದೂ ಸಾಧ್ಯವಾಗಿದೆ. ಹಲವು ಬ್ಯಾಂಕ್ ಶಾಖೆಗಳಲ್ಲಿ ಕನ್ನಡ ಸಂಘಗಳನ್ನು ಹೊಸದಾಗಿ ಹುಟ್ಟುಹಾಕುವುದು ಸಾಧ್ಯವಾಗಿದೆ.

## ಸಹಜೀವನದ ಮಹಾಪ್ರಯೋಗ

ಒಟ್ಟಿನಲ್ಲಿ ಕಮ್ಮಟ ಸ್ವಯಂವಿಕಾಸದ ಮಹತ್ವದ ಸಾಧನ ; ಜೊತೆಗೆ ಸಹಜೀವನದ ಮಹಾಪ್ರಯೋಗ. ಕಮ್ಮಟದ ಆರು ದಿನಗಳಲ್ಲಿ ಬೇರೆಬೇರೆಡೆಗಳಿಂದ ಬಂದ ಕಮ್ಮಟಿಗರು ವಯಸ್ಸು, ಅಂತಸ್ತು, ಜಾತಿ, ಮತಗಳ ಭೇದವಿಲ್ಲದೆ ಒಂದಾಗಿ ಕಲೆತು ಚಿಂತಿಸುತ್ತಾರೆ; ಸಹಜೀವನ ನಡೆಸುತ್ತಾರೆ. ಅವರವರ ಅಂತಸ್ಥ ಪ್ರತಿಭೆ ಹೊರಬರುತ್ತದೆ, ವಿಕಾಸಗೊಳ್ಳುತ್ತದೆ. ಕಮ್ಮಟದ ಆರು ದಿನಗಳು ಮುಗಿದು, ಸಮಾರೋಪ ಸಮಾರಂಭದ ಅನಂತರ ಕಮ್ಮಟಿಗರು ತಂತಮ್ಮ ಊರುಗಳಿಗೆ ಹೊರಟುನಿಂತಾಗ ಅವರ ಕಣ್ಣಂಚುಗಳಲ್ಲಿ ಹನಿ ತುಳುಕಾಡುತ್ತದೆ, ಹೃದಯ ಭಾರವಾಗುತ್ತದೆ :

> ಸ್ವರ್ಗದೊಳಗೀ ಸ್ನೇಹ ದೊರೆವುದೇನು ?
> ಈ ಪರಿಯ ಸೌಭಾಗ್ಯ, ಕೆಳೆಯ ವೈಭವವು ?

ಎಂದು ಕವಿಯೊಂದಿಗೆ ಉದ್ಗರಿಸುವಂತಾಗುತ್ತದೆ.

ಬ್ಯಾಂಕಿಂಗ್ ಕಮ್ಮಟ ಒಂದು ವಿಶಿಷ್ಟ ಅನುಭವ, ಅನನ್ಯ ಪ್ರಯೋಗ. ಅಂತೆಯೇ ಅದು ನೂರು ದಿನ ದಾಟಿ ಮುನ್ನಡೆಯುತ್ತಿದೆ. ವಿಚಾರಚಕ್ರಕ್ಕೆ ಮೊದಲೆಲ್ಲಿ ? ಕೊನೆಯಲ್ಲಿ ? ಅದು ಅನುಸ್ಯೂತ. ಅದು ಕತ್ತರಿಸಿದಾಗ ಬೆಳವಣಿಗೆಯೇ ಕುಂಠಿತವಾದಂತೆ. ಈ ಧಾರೆ ಮುಂದುವರಿಯುವಂತೆ ನೋಡಿಕೊಳ್ಳುವುದು ಸಂಬಂಧಿಸಿದ ಎಲ್ಲರ ಜವಾಬ್ದಾರಿ. ●

# ಕರ್ನಾಟಕ ಸಾಧನೆ–ಪ್ರಗತಿಗೆ ನಾಂದಿ

## ಸ್ವಾತಂತ್ರ್ಯ ದಿನಾಚರಣೆ ಉತ್ತಮ ಮತ್ತು ಆಶಾದಾಯಕ ಭವಿಷ್ಯಕ್ಕಾಗಿ ಅಲ್ಪಾವಧಿಯಲ್ಲೇ ವಿನೂತನ ಕ್ರಮಗಳು

ಕರ್ನಾಟಕದ ಭವಿಷ್ಯವನ್ನು ರೂಪಿಸುವ ಜವಾಬ್ದಾರಿಯನ್ನು ವಹಿಸಿಕೊಂಡಾಗ ಮುಂದಿದ್ದ ಸಮಸ್ಯೆಗಳು ದಿಗ್ಭ್ರಮೆ ಉಂಟುಮಾಡಿದವು. ಆರ್ಥಿಕ ಸಂಯಮ ಮತ್ತು ಕ್ರಿಯಾತ್ಮಕ ಕಾರ್ಯವೈಖರಿ ಮೂಲಕ ಪರಿಸ್ಥಿತಿಯನ್ನು ನಿಭಾಯಿಸಿ ರಾಜ್ಯಕ್ಕೆ ಹೊಸ ಆಯಾಮ ನೀಡಿ ಜನತೆಯ ಜೀವನ ಸಮೃದ್ಧವಾಗುವಂತೆ ಮಾಡಲಾಗುತ್ತಿದೆ.

ಶೇಂದಿ ಮಾರಾಟದಿಂದ ಬೊಕ್ಕಸಕ್ಕೆ 60 ಕೋಟಿ ರೂ. ನಷ್ಟವಾದರೂ 'ಸೆಕೆಂಡ್ಸ್' ಮದ್ಯಮಾರಾಟ ರದ್ದು, ಸಾರಾಯಿ ಮಾರಾಟಕರ ಹೆಚ್ಚಳ, ಮಾರಾಟ ತೆರಿಗೆ, ಸಾರಿಗೆ ಶುಲ್ಕ ಸ್ಟ್ಯಾಂಪ್ಸ್ ಹಾಗೂ ನೋಂದಣಿ ಶುಲ್ಕಗಳ ಪರಿಣಾಮಕಾರಿ ಸಂಗ್ರಹದಿಂದಾಗಿ 550 ಕೋಟಿ ರೂ. ಹೆಚ್ಚಿನ ಆದಾಯ ಲಭಿಸಿದೆ. ಈ ಹಿನ್ನೆಲೆಯಲ್ಲಿ 631.90 ಕೋಟಿ ರೂ. ಹಳೇ ಬಾಕಿ ತೀರಿಸಿ ಅಭಿವೃದ್ಧಿಕಾರ್ಯಗಳಿಗೆ ಹೆಚ್ಚು ಒತ್ತು ನೀಡಲಾಗಿದೆ. ಜೊತೆಗೆ ಸರ್ಕಾರಿ ವೆಚ್ಚದ ಸಾಧಕ—ಬಾಧಕಗಳ ಸಮೀಕ್ಷೆಗೆ ರಾಜ್ಯ ಹಣಕಾಸು ಮಂಡಳಿಯನ್ನು ಸಹ ಸ್ಥಾಪಿಸಲಾಗಿದೆ.

ರಾಜ್ಯದಲ್ಲಿ ದಕ್ಷ ಹಾಗೂ ಸ್ವಚ್ಛ ಆಡಳಿತ ನೀಡುವ ದೃಷ್ಟಿಯಿಂದ ಕೆಲವು ಬಿಗಿ ಕ್ರಮ ತೆಗೆದುಕೊಂಡು ಆಡಳಿತ ಯಂತ್ರಕ್ಕೆ ಪುನಶ್ಚೇತನ ನೀಡಲಾಗಿದೆ. ಭ್ರಷ್ಟಾಚಾರಿ, ನಿರುಪಯೋಗಿ ನೌಕರರನ್ನು ನಿವೃತ್ತಿಗೊಳಿಸುವ ಇಲ್ಲವೆ ವಜಾಗೊಳಿಸುವ ಕ್ರಮಕ್ಕಾಗಿ ಶ್ರೇಷ್ಠ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರ ನೇತೃತ್ವದಲ್ಲಿ ಪರಿಶೀಲನಾ ಸಮಿತಿ ಸ್ಥಾಪನೆ ಮಾಡಲಾಗಿದೆ.

ಕೊಂಕಣ ರೈಲು ಮಾರ್ಗ ಕರಾವಳಿ ಪ್ರದೇಶಗಳ ವಾಣಿಜ್ಯ ಮತ್ತು ಕೈಗಾರಿಕಾ ಅಭಿವೃದ್ಧಿಗೆ ಸಹಕಾರಿಯಾಗುವುದರ ಜೊತೆಗೆ ಮಂಗಳೂರು—ಮುಂಬೈ ನಡುವೆ 1050 ಕಿ.ಮೀ. ದೂರ ಕಡಿಮೆಯಾಗಲಿದೆ. ರಾಜ್ಯ ಸರ್ಕಾರ ಈ ಯೋಜನೆಗೆ ತನ್ನ ಪಾಲಾದ 37.5 ಕೋಟಿ ರೂ.ಗಳನ್ನು ಒದಗಿಸಿದೆ.

ರಾಜ್ಯದಲ್ಲಿ ಪ್ರಾದೇಶಿಕ ಅಸಮಾನತೆಯನ್ನು ತೊಡೆದುಹಾಕುವ ದೃಷ್ಟಿಯಿಂದ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿಗೆ ಈ ವರ್ಷ ಆಯವ್ಯಯದಲ್ಲಿ ನೀಡಿರುವ 53 ಕೋಟಿ ರೂ.ಗಳ ಜೊತೆಗೆ ಇನ್ನು 50 ಕೋಟಿ ರೂ. ವಿಶೇಷ ಸಹಾಯಧನವನ್ನು ಸರ್ಕಾರ ಒದಗಿಸಿದೆ.

ಪರಿಶಿಷ್ಟ ಜಾತಿ, ವರ್ಗಗಳ ಶ್ರೇಯೋಭಿವೃದ್ಧಿಗೆ ವಿಶೇಷ ಗಮನ ನೀಡಲಾಗಿದೆ. ಅರಣ್ಯ ಜಮೀನು ಬಿಟ್ಟು ಸರ್ಕಾರದ ಜಮೀನಿನಲ್ಲಿ ಬಗರ್ ಹುಕುಂ ಸಾಗುವಳಿ ಸಕ್ರಮ, ಜನತಾಮನೆ ನಿರ್ಮಾಣಕ್ಕಾಗಿ 15 ಕೋಟಿ ರೂ. ಮೀಸಲು, ಮೆಟ್ರಿಕ್ ಪೂರ್ವ, ಮೆಟ್ರಿಕ್ ನಂತರ ಹಾಗೂ ಆಶ್ರಮಶಾಲೆಗಳ ವಿದ್ಯಾರ್ಥಿಗಳಿಗೆ ಊಟ ಹಾಗೂ ಹಾಸಿಗೆ ಭತ್ಯೆಯಲ್ಲಿ ಗಣನೀಯ ಹೆಚ್ಚಳ. ಡಾ. ಬಿ. ಆರ್. ಅಂಬೇಡ್ಕರ್ ಅವರ ಜನ್ಮಶತಾಬ್ದಿ ಅಂಗವಾಗಿ ಬೆಂಗಳೂರಿನಲ್ಲಿ ಅಂಬೇಡ್ಕರ್ ಭವನ ನಿರ್ಮಾಣ ಇವು ಸರ್ಕಾರ ಈ ವರ್ಷ ಮಾಡಲಿರುವ ಪ್ರಮುಖ ಕಾರ್ಯಗಳು.

ಕೇಂದ್ರ ಸರ್ಕಾರದ ಸಾಲ ಮನ್ನಾ ಸೂತ್ರಕ್ಕೆ ರಾಜ್ಯ ಸರ್ಕಾರ ತಾತ್ವಿಕವಾಗಿ ಒಪ್ಪಿಕೊಂಡು 1989ರ ಅಕ್ಟೋಬರ್ 2ರ ವರೆಗೆ ರೈತರು ಪಡೆದಿರುವ ಹತ್ತು ಸಾವಿರ ರೂ.ಗಳ ವರೆಗಿನ ಸಾಲವನ್ನು ಮನ್ನಾ ಮಾಡಲಿದೆ. ರಾಜ್ಯದ ಒಂದು ಸಾವಿರ ಹಳ್ಳಿಗಳಿಗೆ ನೀರು ಪೂರೈಕೆ ಮತ್ತು ನೈರ್ಮಲ್ಯಕ್ಕಾಗಿ ವಿಶ್ವ ಬ್ಯಾಂಕ್ ನೆರವಿನ 143 ಕೋಟಿ ರೂ. ಸಮಗ್ರ ಯೋಜನೆ. ಗ್ರಾಮೀಣ ಪ್ರದೇಶಗಳಲ್ಲಿ ಸುಧಾರಿತ ಶೌಚಾಲಯಗಳ ನಿರ್ಮಾಣ—ನಿರ್ಮಲ ಗ್ರಾಮಯೋಜನೆ.

ಶಿಕ್ಷಣಕ್ಕೆ ಹೆಚ್ಚಿನ ಉತ್ತೇಜನ ನೀಡುವ ದೃಷ್ಟಿಯಿಂದ 48 ಕೋಟಿ ರೂ. ವೆಚ್ಚದಲ್ಲಿ 18,000ಕ್ಕೂ ಹೆಚ್ಚು ಶಿಕ್ಷಕರನ್ನು ನೇಮಿಸಲಾಗುವುದು. ಶಾಲಾ ಕೊಠಡಿ ಆವಶ್ಯಕತೆಯನ್ನು ಮನಗಂಡು ವಿದ್ಯಾಮಂದಿರ ಯೋಜನೆ ಅಡಿಯಲ್ಲಿ 5 ಸಾವಿರ ಶಾಲಾ ಕೊಠಡಿಗಳನ್ನು 10 ಕೋಟಿ ರೂ. ವೆಚ್ಚದಲ್ಲಿ ಈ ವರ್ಷ ಕಟ್ಟಲಾಗುವುದು.

ಉತ್ತಮ ವೈದ್ಯಕೀಯ ಸೇವೆ ಒದಗಿಸಲು ಆಸ್ಪತ್ರೆಗಳಿಗೆ 2845 ವೈದ್ಯಕೀಯ ಸಿಬ್ಬಂದಿಗಳನ್ನು ನೇಮಿಸಲಾಗುವುದು.

ಪ್ರತ್ಯೇಕ ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಸಾಕಾರವಾಗಲಿದೆ. ಇದಕ್ಕಾಗಿ ಸರ್ಕಾರ ಒಂದು ಕೋಟಿ ರೂ. ನೀಡಿದೆ. ಕನ್ನಡದ ಸಮಗ್ರ ಅಭಿವೃದ್ಧಿಗೆ 50 ಲಕ್ಷ ರೂ.ಗಳನ್ನು ಒದಗಿಸಿದ್ದು ಕನ್ನಡ ಪುಸ್ತಕಗಳ ಪ್ರಕಾಶನ, ಮುದ್ರಣ ಸಾಮಗ್ರಿ ಇತ್ಯಾದಿ ಕಾರ್ಯಕ್ರಮಗಳಿಗೆ ಉತ್ತೇಜನ ನೀಡಲಾಗಿದೆ.

ವಿವಿಧ ನ್ಯಾಯಾಲಯಗಳಲ್ಲಿ ಬಹಳ ದಿನಗಳಿಂದ ಇತ್ಯರ್ಥವಾಗದೇ ಉಳಿದಿರುವ ಕೌಟುಂಬಿಕ ಹಾಗೂ ಅಪಘಾತ ಪ್ರಕರಣಗಳನ್ನು ತ್ವರಿತವಾಗಿ ಬಗೆಹರಿಸಲು ಲೋಕಅದಾಲತ್‌ಗಳನ್ನು ನಡೆಸಿ 1,91,715 ಪ್ರಕರಣಗಳನ್ನು ಇತ್ಯರ್ಥ ಮಾಡಲಾಗಿದೆ. ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆದ ಲೋಕ ಅದಾಲತ್ ಸಮಾವೇಶ ಒಂದರಲ್ಲೇ 5 ಸಾವಿರ ಪ್ರಕರಣಗಳನ್ನು ಇತ್ಯರ್ಥಗೊಳಿಸಿ ದಾಖಲೆ ಮಾಡಲಾಗಿದೆ.

ಗ್ರಾಹಕರ ಹಿತರಕ್ಷಣೆಗೆ ರಾಜ್ಯಮಟ್ಟದ ಆಯೋಗವೂ ಸೇರಿದಂತೆ ಬೆಂಗಳೂರು, ಮೈಸೂರು, ಗುಲ್ಬರ್ಗಾ ಮತ್ತು ಬೆಳಗಾವಿಗಳಲ್ಲಿ ವಿಭಾಗ ಮಟ್ಟದ ಮಂಡಲಿಗಳನ್ನು ಸ್ಥಾಪಿಸಿದ್ದು ಪ್ರತಿ ಜಿಲ್ಲೆಗಳಲ್ಲಿ ಅದರ ಶಾಖೆಯ ಉಪನಿರ್ದೇಶಕರಿಗೆ ನೀಡುವ ಮನವಿಗಳನ್ನು ಜಿಲ್ಲಾಮಟ್ಟದಲ್ಲಿ ಇತ್ಯರ್ಥಗೊಳಿಸಲಾಗುವುದು.

ಜನತೆಯ ಆಶೆ–ಆಶೋತ್ತರಗಳಿಗೆ ಸ್ಪಂದಿಸಲು ಈ ಸರ್ಕಾರ ಅಧಿಕಾರಕ್ಕೆ ಬಂದ ಅಲ್ಪಾವಧಿಯಲ್ಲೇ ಕೈಗೊಂಡ ಕೆಲವು ಸಕ್ರಿಯ ಕ್ರಮಗಳು ಇನ್ನು ತ್ವರಿತ ಪ್ರಗತಿಯನ್ನು ಸಾಧಿಸಲು ಹಲವಾರು ಯೋಜನೆಗಳು ರೂಪುಗೊಳ್ಳುತ್ತಿವೆ. ಸ್ವಾತಂತ್ರ್ಯದಿನೋತ್ಸವದ ಈ ಶುಭ ಸಂದರ್ಭದಲ್ಲಿ ಸರ್ಕಾರ ಜನರ ಆಶೋತ್ತರಗಳನ್ನು ಪೂರೈಸಲು ಪುನರ್ ಸಮರ್ಪಿಸಿಕೊಳ್ಳುತ್ತದೆ.

ಹರಿ : 14890

— ಕರ್ನಾಟಕ ವಾರ್ತೆ

# ಬ್ಯಾಂಕುಗಳಲ್ಲಿ ಗಣಕಗಳ ಪ್ರವೇಶ

## ಒಂದು ಮಹತ್ತ್ವದ ಹೆಜ್ಜೆ

**ಬ್ಯಾಂಕ್ ಶಾಖೆಗಳ ಸಂಖ್ಯೆ ಹಾಗೂ ವ್ಯವಹಾರದ ಗಾತ್ರ, ಇವುಗಳಲ್ಲಾಗಿರುವ ಅಗಾಧ ಹೆಚ್ಚಳದಿಂದಾಗಿ ಮೇಲ್ವಿಚಾರಣೆಯಲ್ಲಿ ಗೊಂದಲ, ಗ್ರಾಹಕ ಸೇವೆಯಲ್ಲಿ ವಿಳಂಬ, ಸಿಬ್ಬಂದಿಯ ನಿರ್ವಹಣೆ—ಇತ್ಯಾದಿ ಹಲವು ಸಮಸ್ಯೆಗಳು ಹುಟ್ಟಿಕೊಂಡಿವೆ. ಇವುಗಳ ಪರಿಹಾರಕ್ಕಾಗಿ ಪ್ರವೇಶಿಸಿವೆ—ಗಣಕಗಳು.**

ಹೇಮಚಂದ್ರ

**ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್**
**ರಾಯಚೂರು 584101**

ಬ್ಯಾಂಕುಗಳಲ್ಲಿ ಯಾಂತ್ರೀಕರಣ ಒಂದು ಮಹತ್ವದ ಹೆಜ್ಜೆ. ದೇಶದ ಎಲ್ಲ ರಂಗಗಳಲ್ಲಿಯೂ ಯಾಂತ್ರೀಕರಣ ಭರದಿಂದ ಸಾಗುತ್ತಿದ್ದು, ಭಾರತೀಯ ಬ್ಯಾಂಕುಗಳನ್ನೂ ಅದು ಪ್ರವೇಶಿಸುತ್ತಿದೆ—ಆದರೆ ಹಂತಹಂತವಾಗಿ ಬ್ಯಾಂಕುಗಳ ರಾಷ್ಟ್ರೀಕರಣದ ಅನಂತರ ಭಾರತದಲ್ಲಿ ಬ್ಯಾಂಕುಗಳ ಬೆಳವಣಿಗೆ ಗಮನಾರ್ಹ. 1969ರಿಂದ 1989ರ ನಡುವಿನ ಎರಡು ದಶಕಗಳಲ್ಲೇ ಶಾಖೆಗಳು 8,000ದಿಂದ 57,000ಕ್ಕೆ ಹಾಗೂ ಸಿಬ್ಬಂದಿ 2 ಲಕ್ಷದಿಂದ 9 ಲಕ್ಷಕ್ಕೆ ಹೆಚ್ಚಿವೆ. ಸದ್ಯ ಸಾರ್ವಜನಿಕ ವಲಯದ ಬ್ಯಾಂಕುಗಳಲ್ಲಿ 30 ಕೋಟಿಗೂ ಮಿಕ್ಕ ಠೇವಣಿ ಖಾತೆಗಳು ಹಾಗೂ 3.3 ಕೋಟಿಗೂ ಮಿಕ್ಕ ಉದರಿ ಖಾತೆಗಳು ಇವೆ. ಒಟ್ಟು ಬ್ಯಾಂಕ್ ವ್ಯವಹಾರದ ಶೇ 60ರಿಂದ 65ರಷ್ಟು ವ್ಯವಹಾರ 100 ಕೇಂದ್ರಗಳ 10,000 ಶಾಖೆಗಳಲ್ಲಿ ಸಾಂದ್ರೀಕೃತವಾಗಿದೆ.

ಬ್ಯಾಂಕ್ ವ್ಯವಹಾರದ ಗಾತ್ರದಲ್ಲಾದ ಈ ಹೆಚ್ಚಳ ಅನೇಕ ಸಮಸ್ಯೆಗಳನ್ನು ತಂದೊಡ್ಡಿದೆ—ಮೇಲ್ವಿಚಾರಣೆಯಲ್ಲಿ ಗೊಂದಲ, ಗ್ರಾಹಕಸೇವೆಯಲ್ಲಿ ವಿಳಂಬ, ಸಿಬ್ಬಂದಿಯ ಸಮಸ್ಯೆ ಇತ್ಯಾದಿ. 80ರ ದಶಕದ ಮೊದಲಿನ ವರೆಗೂ ಬ್ಯಾಂಕುಗಳು ಯಂತ್ರಗಳ ನೆರವಿಲ್ಲದೆ ಹೇಗೋ ನಿಭಾಯಿಸುತ್ತಿದ್ದವು. ಇವೆಲ್ಲವನ್ನೂ ಅನುಲಕ್ಷಿಸಿ, ಭಾರತೀಯ ರಿಸರ್ವ್ ಬ್ಯಾಂಕು 1983ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕಿನ ಉಪ ಗವರ್ನರ್ ಡಾ ಸಿ. ರಂಗರಾಜನ್‌ರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯಲ್ಲಿ ಆಯ್ದ ಪ್ರಮುಖ ಬ್ಯಾಂಕುಗಳ ಅಧ್ಯಕ್ಷರುಗಳು, ಸರ್ಕಾರದ ಉನ್ನತ ಅಧಿಕಾರಿಗಳು ಹಾಗೂ ಭಾರತೀಯ ರಿಸರ್ವ್ ಬ್ಯಾಂಕಿನ ಅಧಿಕಾರಿಗಳು ಇದ್ದರು. ಬ್ಯಾಂಕುಗಳಲ್ಲಿ 3 ಮಟ್ಟಗಳಲ್ಲಿ ಯಾಂತ್ರೀಕರಣವನ್ನು ಈ ಸಮಿತಿ ಶಿಫಾರಸು ಮಾಡಿತು : 1 ಶಾಖೆ, 2 ವಲಯ ಕಛೇರಿ, 3 ಪ್ರಧಾನ ಕಛೇರಿ.

ಆದರೆ ಮೊದಮೊದಲು ಯಾಂತ್ರೀಕರಣಕ್ಕೆ ಬ್ಯಾಂಕ್ ನೌಕರರ ಸಂಘದ ತೀವ್ರ ಆಕ್ಷೇಪಣೆ ಇತ್ತು. 1987ರ ಮಾರ್ಚಿ 29ರಂದು ಭಾರತೀಯ ಬ್ಯಾಂಕರುಗಳ ಸಂಘ ಹಾಗೂ ಬ್ಯಾಂಕ್ ನೌಕರರ ಸಂಘಗಳ ನಡುವಿನ ಒಪ್ಪಂದದಿಂದಾಗಿ ಬ್ಯಾಂಕುಗಳಲ್ಲಿ ಯಾಂತ್ರೀಕರಣ/ಗಣಕಗಳ ಬಳಕೆಗೆ ದಾರಿ ಸುಗಮವಾಯಿತು.

### ಒಪ್ಪಂದ

ಭಾರತೀಯ ಬ್ಯಾಂಕರುಗಳ ಸಂಘ ಹಾಗೂ ನೌಕರರ ಸಂಘಗಳ ನಡುವೆ ಆದ ಒಪ್ಪಂದದ ಪ್ರಕಾರ ಶಾಖೆಗಳಲ್ಲಿ ಗಣಕಗಳಲ್ಲದೆ, ಮುನ್ನಡೆದ ಖಾತಾ ವರ್ಗ ಯಂತ್ರಗಳ (ALPM : Advanced Ledger Posting Machine) ಹಾಗೂ ಮುನ್ನಡೆದ ವಿದ್ಯುನ್ಮಾನ ಲೆಕ್ಕ ಯಂತ್ರಗಳ (AEAM : Advanced Electronic Accounting Machine) ಸ್ಥಾಪನೆ ಸಾಧ್ಯವಾಯಿತು. ಆದರೆ ಈ ಯಂತ್ರಗಳಿಗೆ ಬ್ಯಾಂಕಿನ ಅನೇಕ ಕಾರ್ಯಗಳಲ್ಲಿ ಕೇವಲ ಒಂದು ಕಾರ್ಯವನ್ನು ನೀಡಬೇಕೆಂದು ಷರತ್ತು ಹಾಕಲಾಯಿತು. ಈಗಾಗಲೇ ಅನೇಕ ಶಾಖೆಗಳಲ್ಲಿ ಮುಖಾವಯಂಗಳು (ALPM) ಕಾರ್ಯ ನಿರ್ವಹಿಸುತ್ತಿವೆ. ಒಂದು ಯಂತ್ರದ ಸರಾಸರಿಯನ್ನು ಉಳಿತಾಯ ಖಾತೆಗೆ 2,200 ವೋಚರುಗಳಿಗೂ, ಚಾಲೂಖಾತೆ, ಮೀರಳಿತ, ಉದರಿ ಖಾತೆಗಳಿಗೆ 400 ವೋಚರ್‌ಗಳಿಗೂ ಸೀಮಿತಗೊಳಿಸಲಾಗಿದೆ.

ಈ ಯಂತ್ರಗಳನ್ನು ಸ್ಥಾಪಿಸಲು ಬ್ಯಾಂಕುಗಳನ್ನು 2 ಭಾಗಗಳನ್ನಾಗಿ ಮಾಡಲಾಯಿತು :

1 31 ಡಿಸೆಂಬರ್ 1985ರಲ್ಲಿದ್ದಂತೆ ಬ್ಯಾಂಕುಗಳ ಒಟ್ಟು ಠೇವಣಿ ರೂ 1,500 ಕೋಟಿಗೂ ಮೀರಿದ್ದು ಸರಾಸರಿ ದಿನವೊಂದಕ್ಕೆ 1,000 ವೋಚರ್‌ಗಳ ನಿರ್ವಹಣೆ.

2 ಬ್ಯಾಂಕುಗಳ ಒಟ್ಟು ಠೇವಣಿ 31 ಡಿಸೆಂಬರ್ 1985ರಲ್ಲಿದ್ದಂತೆ ರೂ 1,500 ಕೋಟಿಗೂ ಕಡಿಮೆ ಇದ್ದು ಸರಾಸರಿ ದಿನವೊಂದಕ್ಕೆ 750 ವೋಚರ್‌ಗಳ ನಿರ್ವಹಣೆ.

1987ರ ಡಿಸೆಂಬರ್ 31ರ ಬ್ಯಾಂಕುಗಳ ಠೇವಣಿಗಳ ಆಧಾರದ ಮೇಲೆ ಈ ಯಂತ್ರಗಳನ್ನು ಬ್ಯಾಂಕುಗಳಲ್ಲಿ ಹಂಚಬೇಕು. ಸಾರ್ವಜನಿಕ ವಲಯದ 28 ಬ್ಯಾಂಕುಗಳೂ ಸೇರಿದಂತೆ 1987ರ ಸೆಪ್ಟೆಂಬರ್ 7ರ ವರೆಗೆ 3,500 ಯಂತ್ರಗಳನ್ನೂ ಮುಂದಿನ ಎರಡು ವರ್ಷಗಳಲ್ಲಿ 5,700 ಯಂತ್ರಗಳನ್ನೂ ಸೇರಿಸಬಹುದು. ಇದರಲ್ಲಿ ಸಾರ್ವಜನಿಕ ವಲಯದ ಬ್ಯಾಂಕುಗಳ ಪಾಲಿಗೆ, ಸಪ್ಟೆಂಬರ್ 1987ರ ವರೆಗೆ, 5,480 ಯಂತ್ರಗಳು ಬಂದುವು.

### ಶಾಖಾ ಮಟ್ಟದಲ್ಲಿ ಯಾಂತ್ರೀಕರಣ

ಉತ್ತಮ ಗ್ರಾಹಕಸೇವೆ, ಮನೆವಾರ್ತೆ, ನಿಯಂತ್ರಣ, ವ್ಯವಸ್ಥಾಪನ ಮಾಹಿತಿ ವ್ಯವಸ್ಥೆಗಾಗಿ ಅಂಕಿ-ಅಂಶಗಳ ಕ್ರೋಡೀಕರಣ, ಇವನ್ನು ಲಕ್ಷ್ಯದಲ್ಲಿರಿಸಿಕೊಂಡು ಶಾಖೆಗಳನ್ನು ಗುರುತಿಸಲಾಯಿತು. ಇದರಲ್ಲಿಯೂ ಕೆಲವು ತೊಂದರೆಗಳು ಕಂಡುಬಂದುವು :

1 ನಗರ ಪ್ರದೇಶದ ಶಾಖೆಗಳಲ್ಲಿ ಸ್ಥಳದ ಅಭಾವ, ವಿದ್ಯುತ್ ಕೊರತೆ,
2 ತಡೆರಹಿತ ವಿದ್ಯುತ್ತಿನ ಅಭಾವ ಹಾಗೂ
3 ವೈಯಕ್ತಿಕ ಬ್ಯಾಂಕುಗಳಿಗೆ ಹೊಂದಿಕೊಳ್ಳುವ ಹಾಗೆ ತಾಂತ್ರಿಕಾಂಶದ (Software) ಬಳಕೆಯ ಸಮಸ್ಯೆ.

ಗಣಕ ತಯಾರಿಕಾ ಸಂಸ್ಥೆಗಳು ಹಾಗೂ ಬ್ಯಾಂಕರುಗಳು ಸೇರಿ ಬ್ಯಾಂಕ್ ಕೆಲಸಕ್ಕೆ ಸಾಧ್ಯವಾಗುವ ಹಾಗೆ, ದ್ವಿಭಾಷಾಸೂತ್ರಕ್ಕನುಗುಣವಾಗಿ ಮುಖಾವಯಂಗಳನ್ನು (ALPM) ತಯಾರಿಸುವ ಸಾಧ್ಯತೆಯನ್ನು ಪರಿಶೀಲಿಸಲಾಯಿತು. 1989ರ ನವೆಂಬರ್ 30ರ ವರೆಗೆ 5,217 ಮುಖಾವಯಂಗಳ ಪೈಕಿ 3,508 ಯಂತ್ರಗಳು ಕಾರ್ಯನಿರ್ವಹಿಸುತ್ತಿದ್ದುವು.

### ಪ್ರಯೋಜನಗಳು

1 ಗ್ರಾಹಕರಿಗೆ ನಿಗದಿತ ಸಮಯಕ್ಕೆ ಸರಿಯಾಗಿ, ಸುಂದರವಾಗಿ ಅಚ್ಚಾದ, ಅವರ ಖಾತೆಯ ಲೆಕ್ಕಪಟ್ಟಿ ದೊರೆಯುವುದು. 2 ಬಡ್ಡಿಯನ್ನು ಖಾತೆಗೆ ಆಯಾ ದಿನಾಂಕಗಳಿಗೆ ಸರಿಯಾಗಿ, ಜಮಾ/ಖರ್ಚು ಹಾಕಲಾಗುವುದು. 3 ಖಾತೆದಾರರ ಆದೇಶಗಳನ್ನು ಸಮಯಕ್ಕೆ ಸರಿಯಾಗಿ ಜಾರಿಗೊಳಿಸಲಾಗುವುದು. 4 ಗ್ರಾಹಕರ ಕುಂದುಕೊರತೆಗಳಿಗೆ ತೀವ್ರ ಲಕ್ಷ್ಯ

ದೊರೆಯುವುದು. 5 ಶೀಘ್ರವಾಗಿ ಚೆಕ್ಕುಗಳ ಪಾವತಿ.

ಮನೆವಾರ್ತೆ : ಸಿಬ್ಬಂದಿ ವರ್ಗದ ಕಾರ್ಯದಕ್ಷತೆಯಲ್ಲಿ ಹೆಚ್ಚಳ ; ಅವಧಿಗೆ ಸರಿಯಾಗಿ ಖಾತಾ ವಹಿಗಳ ತಾಳೆನೋಡುವಿಕೆ.

ವಲಯ ಕಛೇರಿ : 1 ಅಂಕಿಅಂಶಗಳ ಶೇಖರಣೆ. 2 ಪ್ರಧಾನ ಕಚೇರಿಯ ಗಣಕದೊಂದಿಗೆ ನೇರ ಸಂಪರ್ಕ. 3 ಉತ್ತಮ ವ್ಯವಸ್ಥಾಪನೆ ಹಾಗೂ ನಿಯಂತ್ರಣಕ್ಕಾಗಿ ಅಂಕಿ–ಅಂಶಗಳ ಬಳಕೆ.

ಇತರ ಕ್ಷೇತ್ರಗಳು : ವಿ ದೇ ಶಿ ವಿ ನಿ ಮ ಯ, ಅಂತರರಾಷ್ಟ್ರೀಯ ಬ್ಯಾಂಕಿಂಗ್, ಅಂತರ–ಶಾಖಾ ಸಮನ್ವಯ ತಖ್ತೆ ಇತ್ಯಾದಿಗಳಲ್ಲಿ 600ಕ್ಕೂ ಹೆಚ್ಚಿನ ಗಣಕಗಳ ಉಪಯೋಗವಾಗುತ್ತಿದೆ.

## ತೀರುವೆ ಮನೆ

ನಮ್ಮ ದೇಶದಲ್ಲಿ ಸುಮಾರು 700 ತೀರುವೆ ಮನೆಗಳಿವೆ. ಇವುಗಳ ಪೈಕಿ 14ರ ನಿರ್ವಹಣೆ ಭಾರತೀಯ ರಿಸರ್ವ್ ಬ್ಯಾಂಕಿನದು. ಉಳಿದಂತೆ ತೀರುವೆ ಮನೆಗಳ ನಿರ್ವಹಣೆ ಭಾರತೀಯ ಸ್ಟೇಟ್ ಬ್ಯಾಂಕ್ ಅಥವಾ ಅದರ ಯಾವುದೇ ಸಹವರ್ತಿ ಬ್ಯಾಂಕಿನದು. ಈ 14 ತೀರುವೆ ಮನೆಗಳು ದೇಶದ ಶೇಕಡ 60ರಿಂದ 70ರಷ್ಟು ವ್ಯವಹಾರ ಮಾಡುತ್ತವೆ. ಸದ್ಯ ತೀರುವೆ ಮನೆಗಳಲ್ಲಿ ದಿನವೊಂದಕ್ಕೆ ಸುಮಾರು ಹತ್ತು ಲಕ್ಷಕ್ಕಿಂತಲೂ ಹೆಚ್ಚಿನ ಚೆಕ್ಕುಗಳು ಇತ್ಯರ್ಥವಾಗುತ್ತವೆ. ಇದರಲ್ಲಿ ಸಿಂಹಪಾಲು ಮುಂಬಯಿ ತೀರುವೆ ಮನೆಯದು. ಇಲ್ಲಿ ದಿನವೊಂದಕ್ಕೆ 4–5 ಲಕ್ಷ ಚೆಕ್ಕುಗಳು ಇತ್ಯರ್ಥಗೊಳ್ಳುತ್ತವೆ. ದೇಶದ ಪ್ರಮುಖ ಕೇಂದ್ರಗಳಾದ ಅಹ್ಮದಾಬಾದ್, ಬೆಂಗಳೂರು, ಮುಂಬಯಿ, ಕಲಕತ್ತಾ, ಹೈದ್ರಾಬಾದ್, ಕಾನಪುರ, ಮದರಾಸು, ನವದೆಹಲಿ ಹಾಗೂ ನಾಗಪುರ ತೀರುವೆ ಮನೆಗಳಲ್ಲಿ ಗಣಕಗಳನ್ನು ಅಳವಡಿಸಲಾಗಿದೆ. ಈ ಗಣಕಗಳನ್ನು ಭಾರತೀಯ ರಿಸರ್ವ್ ಬ್ಯಾಂಕು ತನ್ನ ಆಂತರಿಕ ಮನೆವಾರ್ತೆಗಾಗಿಯೂ ಬಳಸುತ್ತದೆ.

ಗಣಕೀಕರಣದಿಂದ ತೀರುವೆ ಮನೆಯ ಕೆಲಸ ಸುಲಭ ಹಾಗೂ ಕರಾರುವಾಕ್ಕಾಗಿ ನಡೆಯುತ್ತಿದ್ದು ಚೆಕ್ಕುಗಳ ವಿಲೇವಾರಿಯಲ್ಲಿ ಈ ಮೊದಲಿನಂತೆ ವಿಳಂಬವಾಗುತ್ತಿಲ್ಲ. ಒಂದು ಲಕ್ಷ ರೂಪಾಯಿ ಹಾಗೂ ಅದಕ್ಕೂ ಹೆಚ್ಚಿನ ಮೊತ್ತದ ಸಂಲೇಖಗಳಿಗಾಗಿ ವಿಶೇಷ ತೀರುವೆ ಸೇವೆಯನ್ನು ಮುಂಬಯಿ, ಮದರಾಸು ಹಾಗೂ ಕಲಕತ್ತೆಗಳಲ್ಲಿ ಪ್ರಾರಂಭಿಸಲಾಗಿದೆ. ಇದರ ಪ್ರಕಾರ 24 ತಾಸುಗಳಲ್ಲಿ ಚೆಕ್ಕಿನ ಹಣವನ್ನು ಖಾತೆಗೆ ಜಮಾಮಾಡಿ ಅದರ ಮುಂದಿನ ಹಣವನ್ನು ಹಿಂಪಡೆಯಲು ಅವಕಾಶ ನೀಡಬಹುದು. ಇದರಿಂದ ವ್ಯಾಪಾರಸ್ಥರಿಗೆ ಬಹಳ ಅನುಕೂಲವಾಗಿದೆ. ಚೆಕ್ಕುಗಳ ತೀವ್ರ ತೀರುವೆಯಿಂದಾಗಿ, ಚೆಕ್ಕುಗಳ ವಸೂಲಾತಿಯಲ್ಲಿ ಸಮಯದ ಗಮನಾರ್ಹವಾದ ಉಳಿತಾಯವಾಗುತ್ತಿದೆ.

1990ರ ಕೊನೆಯ ವರೆಗೆ ಬ್ಯಾಂಕುಗಳು ಹಾಗೂ ಇತರ ಹಣಕಾಸು ಸಂಸ್ಥೆಗಳಿಗೆ ಅನುಕೂಲವಾಗುವಂತೆ 'ಬ್ಯಾಂಕ್‌ನೆಟ್' ದೂರಸಂಪರ್ಕ ಸಾಧನವನ್ನು ರೂಪಿಸಲು ಉದ್ದೇಶಿಸಲಾಗಿದೆ. ಇದರಿಂದ ಹಣವರ್ಗಾವಣೆ, ಸಂದೇಶರವಾನೆ, ವಿದ್ಯುನ್ಮಾನ ಟಪಾಲು ವ್ಯವಸ್ಥೆ, ವ್ಯವಸ್ಥಾಪನ ಮಾಹಿತಿ ವ್ಯವಸ್ಥೆಗೆ ಹೆಚ್ಚಿನ ಅನುಕೂಲವಾಗುವುದು. ವಿಶ್ವವ್ಯಾಪಿ ಅಂತರ ಬ್ಯಾಂಕ್ ಹಣಕಾಸು ದೂರಸಂಪರ್ಕದಲ್ಲಿ (SWIFT : Society for World-wide Interbank Financial Tele communication) ಭಾರತೀಯ ಬ್ಯಾಂಕುಗಳ ಸೇರ್ಪಡೆಯನ್ನು ಸರ್ಕಾರ ತತ್ವಶಃ ಒಪ್ಪಿಕೊಂಡಿದೆ.

## ಗಣಕ ನೀತಿ ಮತ್ತು ಯೋಜನಾ ವಿಕಾಸ ಮುಖ್ಯರ ಸಮ್ಮೇಳನ

ಪ್ರತಿ ವರ್ಷವೂ ಈ ಸಮ್ಮೇಳನ (CPPD-Conference of Chiefs of Computer Policy and Planning Development) ರಾಷ್ಟ್ರೀಯ ಬ್ಯಾಂಕ್ ವ್ಯವಸ್ಥಾಪನ ಸಂಸ್ಥೆಯಲ್ಲಿ ಸೇರುವುದು. ಈ ವರ್ಷದ ಸಭೆ ಮಾರ್ಚ್ 1990ರಲ್ಲಿ ಸೇರಿತ್ತು. ಈ ಸಲ ಚರ್ಚೆಗೊಳಗಾದ ವಿಷಯಗಳು ಇವು : 1 ಬೆಳೆಯುತ್ತಿರುವ ದೇಶಗಳಲ್ಲಿ ಮಾಹಿತಿ ತಂತ್ರಜ್ಞಾನದ ಬಳಕೆ, 2 ಲಭ್ಯವಿರುವ ಸಂಪರ್ಕಸಾಧನಗಳ ಕಾರ್ಯವಿಶ್ಲೇಷಣೆ, 3 ಪ್ರತಿನಿಧಿಗಳ ಅನಿಸಿಕೆಗಳು—ಮಾಹಿತಿ ವ್ಯವಸ್ಥೆ ಮತ್ತು ತಂತ್ರಜ್ಞಾನ ಕುರಿತಂತೆ.

ಭಾರತದಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಗಣಕಗಳ ಪ್ರವೇಶದಿಂದಾಗಿ ನಮ್ಮ ಬ್ಯಾಂಕುಗಳು ಅಂತರರಾಷ್ಟ್ರೀಯ ಮಟ್ಟದಲ್ಲಿಯೂ ನಿಲ್ಲಬಲ್ಲವೆಂಬ ಆತ್ಮವಿಶ್ವಾಸ ಪಡೆದಿವೆ. ●

# ದಾವೆಯ ಪ್ರಕರಣಗಳ ನಿರ್ವಹಣೆ

**ಸಾಲ ನೀಡುವುದು ನಮ್ಮ ಬ್ಯಾಂಕುಗಳ ಒಂದು ಮುಖವಾದರೆ, ನೀಡಿದ ಸಾಲದ ವಸೂಲಿ ಇನ್ನೊಂದು ಮುಖ. ಆದರೆ ಸಾಲ ವಸೂಲಿ ಅಷ್ಟು ಸುಲಭವಲ್ಲ. ವಸೂಲಿಗಾಗಿ ದಾವೆ ಹೂಡಿದಾಗ ಬ್ಯಾಂಕ್ ಎದುರಿಸುವ ನಾನಾ ಸಮಸ್ಯೆಗಳ ವಾಸ್ತವಿಕ ವಿಶ್ಲೇಷಣೆ ಮಾಡಲು ಇಲ್ಲಿ ಯತ್ನಿಸಿದೆ.**

**ಬಿ. ಎಸ್. ಚಂದ್ರಶೇಖರ**
ವ್ಯವಸ್ಥಾಪಕರು
ಭಾರತೀಯ ಸ್ಟೇಟ್ ಬ್ಯಾಂಕ್, ಕಡಗಂಚಿ

ಬ್ಯಾಂಕ್ ಸಾಲಗಳ ಸಂಖ್ಯೆ ಅಗಾಧವಾಗಿ ಹೆಚ್ಚುತ್ತಿರುವ ಈ ದಿನಗಳಲ್ಲಿ ವಸೂಲಾತಿಯದು ಒಂದು ದೊಡ್ಡ ಸಮಸ್ಯೆ. ವಸೂಲಾತಿಗೆ ಇರುವ ಹಲವು ಮಾರ್ಗಗಳಲ್ಲಿ ಅಂತಿಮವಾದದ್ದು ಮತ್ತು ಬಹು ಮುಖ್ಯವಾದದ್ದೆಂದರೆ ಸಾಲಗಾರನ ವಿರುದ್ಧ ನ್ಯಾಯಾಲಯದಲ್ಲಿ ದಾವೆ ಹೂಡುವುದು.

ಬ್ಯಾಂಕ್ ದಾವೆಗಳ ಸಂಖ್ಯೆಯೂ ಹೆಚ್ಚಾಗಿದ್ದು, ಈ ದಾವೆಗಳು ನಿರೀಕ್ಷಿತ ವೇಗದಲ್ಲಿ ಇತ್ಯರ್ಥವಾಗುತ್ತಿಲ್ಲ. ನ್ಯಾಯಾಲಯದ ವ್ಯವಹಾರವೇ ಹಾಗೆಂದು ಈ ಸಮಸ್ಯೆಯನ್ನು ಅಲಕ್ಷಿಸದೆ ದಾವೆಗಳ ಶೀಘ್ರ ಇತ್ಯರ್ಥಕ್ಕೆ ಸಾಧ್ಯವಾದ ಎಲ್ಲ ಕ್ರಮಗಳನ್ನೂ ಕೈಗೊಳ್ಳಬೇಕಾಗಿದೆ. ಕರ್ನಾಟಕ ರಾಜ್ಯವೊಂದರಲ್ಲೇ ಭಾರತೀಯ ಸ್ಟೇಟ್ ಬ್ಯಾಂಕಿನ 27,000ಕ್ಕೂ ಹೆಚ್ಚು ಪ್ರಕರಣಗಳು ಇತ್ಯರ್ಥವಾಗಬೇಕಾಗಿವೆ. ಇವುಗಳಲ್ಲಿ ಸಿಕ್ಕುಬಿದ್ದ ಹಣದ ಮೊತ್ತ ರೂ 60 ಕೋಟಿಗೂ ಹೆಚ್ಚು. ಕರಡು ಸಾಲಗಳ ಸಂಖ್ಯೆಯಲ್ಲಿ ದಾವೆ ಹೂಡಿದ ಖಾತೆಗಳ ಸಂಖ್ಯೆ ಗಣನೀಯ (80,000ದಲ್ಲಿ 27,000). ಡಿಕ್ರಿಯಾದ ಶೇ. 67 ರಷ್ಟು ಪ್ರಕರಣಗಳಲ್ಲಿ ಅವುಗಳ ಜಾರಿಗಾಗಿ ಮನವಿಗಳನ್ನು ಸಲ್ಲಿಸಬೇಕಾಗಿದೆ. ಈಗಾಗಲೇ ಜಾರಿಗಾಗಿ ಸಲ್ಲಿಸಿದ ಮನವಿಗಳೂ ಫಲಕಾರಿಯಾಗದೆ ಉಳಿದಿವೆ. ಇವು ಭಾರತೀಯ ಸ್ಟೇಟ್ ಬ್ಯಾಂಕಿನ ಅಂಕಿಅಂಶಗಳಾದರೂ ಇತರ ಬ್ಯಾಂಕುಗಳ ಪರಿಸ್ಥಿತಿಯೂ ಬಹುಮಟ್ಟಿಗೆ ಹೀಗೇ ಇರುತ್ತದೆಂದು ಊಹಿಸಬಹುದು.

ಕೃಷಿ ಮತ್ತು ಗ್ರಾಮೀಣ ಋಣ ಪರಿಹಾರ ಯೋಜನೆ ಜಾರಿಯಾಗುತ್ತಿರುವ ಈ ಹಂತದಲ್ಲಿ ಬ್ಯಾಂಕ್ ಸಾಲ ಮರುಪಾವತಿ ಮಾಡಲು ಅನುಕೂಲಸ್ಥ ಸಾಲಗಾರರೂ ಮುಂದಾಗುವ ಮನಸ್ಥಿತಿಯಲ್ಲಿಲ್ಲ. ಆದ್ದರಿಂದ ದಾವೆ ಹೂಡುವಂಥ ಕಠಿಣ ಕ್ರಮ ಹಿಂದೆಂದಿಗಿಂತಲೂ ಇಂದು ಹೆಚ್ಚು ಅಗತ್ಯ.

ದಾವೆ ಹೂಡುವ ಕ್ರಿಯೆಯಿಂದಲೇ ಬ್ಯಾಂಕಿನ ಜವಾಬ್ದಾರಿ ಪೂರ್ಣಗೊಂಡಿತೆಂದು ಅನೇಕ ಅಧಿಕಾರಿಗಳು ಭಾವಿಸಿರುವುದುಂಟು. ಈ ಭಾವನೆ ಸರಿಯಲ್ಲವೆಂದು ಹೇಳಬೇಕಾಗಿಲ್ಲ. ದಾವೆಗಳನ್ನು ಹೂಡುವ ಕ್ರಮ, ಅವುಗಳ ನಿರ್ವಹಣೆಯಲ್ಲಿ ಎದುರಾಗುವ ತೊಂದರೆಗಳು ಮತ್ತು ಅವುಗಳ ನಿವಾರಣೆ ಕುರಿತು ಹೆಚ್ಚಿನ ಅರಿವು ಮೂಡಬೇಕಾಗಿದೆ.

## ದಾವೆಗೆ ಮುನ್ನ

ಸಾಲಗಾರನ ವಿರುದ್ಧ ನ್ಯಾಯಾಲಯದಲ್ಲಿ ದಾವೆ ಹೂಡುವ ಮೊದಲು ವಸೂಲಾತಿಯ ಇತರ ಎಲ್ಲ ವಿಧಾನಗಳನ್ನೂ ಪ್ರಯೋಗಿಸಿರಬೇಕಾದ್ದು ಅಗತ್ಯ. ಇಲ್ಲದಿದ್ದರೆ ವೃಥಾ ದಾವೆ ಹೂಡಿದಂತಾಗಿ ಬ್ಯಾಂಕಿಗೂ, ಸಾಲಗಾರರಿಗೂ ಸಮಯ ಹಾಗೂ ದ್ರವ್ಯ ನಷ್ಟವಾಗಬಹುದು. ಸ್ಥೂಲವಾಗಿ ಹೇಳುವುದಾದರೆ, ಸಕಾಲದಲ್ಲಿ ಮರುಪಾವತಿಯಾಗದಿರಲು ಕಾರಣಗಳ ವಿಶ್ಲೇಷಣೆ, ಅಗತ್ಯವಾಗುವ ಸಂದರ್ಭಗಳಲ್ಲಿ ಬ್ಯಾಂಕಿನಿಂದ ಸಾಧ್ಯವಾದ ಹಣಕಾಸು ನೆರವು ಅಥವಾ ಸಾಲಗಾರನ ಪರಿಸ್ಥಿತಿಯನ್ನು ಅನುಸರಿಸಿ ಸಾಲ ಮರುಪಾವತಿಗೆ ಸಮಂಜಸವಾದ ಅವಧಿ ನೀಡುವಿಕೆ—ಇವು ಮುಖ್ಯವಾಗಿ ಆಗಬೇಕಾದದ್ದು. ಆಗಾಗ್ಗೆ ಸಾಲಗಾರರನ್ನು ಭೇಟಿಯಾಗುತ್ತಿದ್ದರೆ ಮರುಪಾವತಿಯ ಸಾಧ್ಯತೆ ಹೆಚ್ಚುತ್ತದೆ. ಶಕ್ತಿಯಿದ್ದೂ ಉದ್ದೇಶಪೂರ್ವಕವಾಗಿ ಮರುಪಾವತಿ ಮಾಡದಿರುವ ಸಾಲಗಾರರ ಮೇಲೆ ಒತ್ತಡ ಹೇರುವ ತಂತ್ರಗಳನ್ನು ಅನುಸರಿಸಬಹುದು. ಈ ಎಲ್ಲ ವಿಧಾನಗಳೂ ವಿಫಲವಾದಲ್ಲಿ ತನ್ನ ಸಾಲ ಮರುಪಾವತಿಗಾಗಿ ಬ್ಯಾಂಕು ಅಂತಿಮ ಸೂಚನೆ ನೀಡಬಹುದು.

ಋಣಪರಿಹಾರ ಯೋಜನೆಯಡಿ ಕೃಷಿಕರು, ಕೃಷಿ ಕಾರ್ಮಿಕರು, ಕುಶಲಕರ್ಮಿಗಳೇ ಮೊದಲಾದ ವರ್ಗಗಳಿಗೆ ಸೇರಿದ ಸಾಲಗಾರರಿಗೆ ಹತ್ತು ಸಾವಿರ ರೂ.ವರೆಗೆ ಋಣ ಪರಿಹಾರ ದೊರೆಯುತ್ತದೆ. ದಾವೆ ಹೂಡುವ ಮೊದಲು ಪರಿಹಾರದ ಮೊತ್ತವನ್ನು ಅಂದಾಜು ಮಾಡಿಕೊಳ್ಳುವುದು ಅಗತ್ಯ.

ಬಾಕಿ ಇರುವ ಮೊತ್ತ ಸ್ವಲ್ಪವಾಗಿದ್ದರೆ ಬ್ಯಾಂಕಿನ ಸೂಚನಾಪತ್ರವೇ ಸಾಕು. ಇಲ್ಲದಿದ್ದರೆ ವಕೀಲರಿಂದ ಸೂಚನಾಪತ್ರವನ್ನು ಜಾರಿಗೊಳಿಸಬೇಕಾಗುತ್ತದೆ. ಅಂತಿಮ ಸೂಚನಾ ಪತ್ರಗಳನ್ನು ಜಾರಿಗೊಳಿಸುವಾಗ ಕೆಲ ಅಂಶಗಳತ್ತ ಎಚ್ಚರಿಕೆ ವಹಿಸಬೇಕು. ಸಾಲಕ್ಕೆ ಸಂಬಂಧಿಸಿದ ದಸ್ತೈವಜುಗಳು ಸಮರ್ಪಕವಾಗಿವೆಯೇ ಮತ್ತು ಚಾಲ್ತಿಯಲ್ಲಿವೆಯೇ? ಹಾಗಿಲ್ಲದಿದ್ದರೆ ಅವನ್ನು ನೇರ್ಪಡಿಸುವತ್ತ ಗಮನ ಹರಿಯಬೇಕು. 2 ಸಾಲಗಾರ ಮತ್ತು ಎಲ್ಲ ಖಾತರಿದಾರರಿಗೂ, ಬ್ಯಾಂಕಿನಲ್ಲಿ ದಾಖಲಾದ ಅವರ ವಿಳಾಸಗಳಿಗೆ, ಅಂತಿಮ ಸೂಚನಾ ಪತ್ರಗಳನ್ನು ಜಾರಿ ಮಾಡಬೇಕು. ಒಂದಕ್ಕಿಂತ ಹೆಚ್ಚು ವಿಳಾಸಗಳಿದ್ದರೆ (ಉದಾ : ಕಾರ್ಖಾನೆ, ಕಛೇರಿ, ನಿವಾಸ) ಎಲ್ಲ ವಿಳಾಸಗಳಿಗೂ ಸೂಚನಾ ಪತ್ರ ಕಳಿಸುವುದು ಅಗತ್ಯ. ವಿಳಾಸ ಬದಲಾದ ಬಗ್ಗೆ ತಿಳಿದು ಬಂದಿದ್ದರೆ ಆ ವಿಳಾಸಕ್ಕೂ ಪತ್ರ ಕಳಿಸಬೇಕು. ಸ್ವೀಕೃತಿ ಬರಬೇಕಾದ ನೋಂದಾಯಿತ ಅಂಚೆಯಲ್ಲಿ ಅಂತಿಮ ಸೂಚನಾ ಪತ್ರವನ್ನು ಕಳಿಸಿ ಸ್ವೀಕೃತಿಗಳನ್ನು ಅಥವಾ ಅಸ್ವೀಕೃತ ಲಕೋಟೆಗಳನ್ನು ಜೋಪಾನವಾಗಿ ಕಾಯ್ದಿರಿಸಿಕೊಳ್ಳಬೇಕು.

## ಪ್ರಕರಣದ ದಾಖಲಾತಿ

ಅಂತಿಮ ಸೂಚನಾ ಪತ್ರಕ್ಕೆ ಸಮಂಜಸವಾದ ಅವಧಿಯಲ್ಲಿ ನಿರೀಕ್ಷಿಸಿದ ಪ್ರತಿಕ್ರಿಯೆ ಬಾರದಿದ್ದಲ್ಲಿ ಸಾಲಗಾರನ ವಿರುದ್ಧ ದಾವೆ ಹೂಡುವ ನಿರ್ಧಾರ ಕೈಗೊಳ್ಳಬಹುದು. ಬ್ಯಾಂಕಿನ ಅಧಿಕೃತ ವಕೀಲರಿಗೆ ಸಾಲಕ್ಕೆ ಸಂಬಂಧಿಸಿದ ದಸ್ತೈವಜುಗಳನ್ನು ನೀಡಿ ವಾದಪತ್ರವನ್ನು (plaint) ತಯಾರಿಸಲು ಹೇಳಬೇಕು. ನೀಡಿದ ಎಲ್ಲ ದಸ್ತೈವಜುಗಳ ಫೋಟೋ ಪ್ರತಿಯನ್ನು ಬ್ಯಾಂಕಿನ ದಾಖಲೆಯಾಗಿ ಉಳಿಸಿಕೊಳ್ಳುವುದು ವ್ಯಾವಹಾರಿಕ. ಈ ದಾಖಲೆಗಳನ್ನು ಪಡೆದ ಬಗೆಗೆ ವಕೀಲರ ಸ್ವೀಕೃತಿಯೂ ಇರಲಿ.

ಕರಡು ವಾದಪತ್ರದ ಪ್ರತಿಗಳನ್ನು ವಕೀಲರಿಂದ ಪಡೆದು ಸಾಲಗಾರನ ವಿವರ, ಸಾಲದ ಸ್ವರೂಪ, ನಿಬಂಧನೆಗಳು ಮತ್ತಿತರ ವಿವರಗಳು ವಾದಪತ್ರದಲ್ಲಿ ಸರಿಯಾಗಿ ದಾಖಲೆಯಾಗಿವೆಯೇ ಎಂದು ಪರಿಶೀಲಿಸಬೇಕಾದ್ದು ಮುಖ್ಯ. ಇಲ್ಲದಿದ್ದರೆ ವಕೀಲರ ಕಣ್ತಪ್ಪಿನಿಂದ ಬ್ಯಾಂಕಿಗೆ ಹಾನಿಯಾಗುವ ಸಂಭವವಿರುತ್ತದೆ. ಉದಾ: ವಾದಪತ್ರದಲ್ಲಿ ಬ್ಯಾಂಕಿಗೆ ಆಡಕವಾಗಿರುವ ಆಸ್ತಿಯ ಮಾರಾಟಕ್ಕೆ ಮನವಿ (Prayer) ಇಲ್ಲದಿರಬಹುದು.

ಹೂಡಿದ ದಾವೆಗಳನ್ನು ಕುರಿತ ವಿವರವಾದ ಮಾಹಿತಿಯನ್ನು 'ದಾವೆಗಳ ಪುಸ್ತಕ' (Suits Filed Regsiter)ದಲ್ಲಿ ದಾಖಲಿಸಬೇಕು. ಅನೇಕ ಶಾಖೆಗಳಲ್ಲಿ ದಾವೆಗಳನ್ನು ಕುರಿತ ಮಾಹಿತಿ ದೊರೆಯುತ್ತಿಲ್ಲ. ಈ ಸ್ಥಿತಿ ಬದಲಾಗಬೇಕು.

ಸಾಲಗಾರನಿಂದ ಪಾವತಿಯಾಗಿರುವ ಎಲ್ಲ ಮೊತ್ತಗಳೂ ಖಾತೆಗೆ ಜಮಾ ಆಗಿವೆಯೆಂಬುದನ್ನು ಖಚಿತಪಡಿಸಿಕೊಳ್ಳಬೇಕು. ಸಾಲಗಾರನಿಗೆ ಬರಬೇಕಾದ ಸಬ್ಸಿಡಿ ಹಣ, ವಿಮೆಯ ಕ್ಲೇಮು ಅಥವಾ ಆಧಾರ ರೂಪವಾಗಿ ಬ್ಯಾಂಕಿನಲ್ಲಿ ಸಾಲಗಾರ ಇಟ್ಟಿರಬಹುದಾದ ಠೇವಣಿ ಹಣ—ಇಂಥ ಮೊತ್ತಗಳನ್ನು ದಾವೆ ಹೂಡುವ ಮೊದಲೇ ಖಾತೆಗೆ ಜಮಾ ಮಾಡಿದರೆ ದಾವೆಯ ಮೊತ್ತ ಇಳಿದು ನ್ಯಾಯಾಲಯಕ್ಕೆ ನೀಡಬೇಕಾದ ಶುಲ್ಕ ಅಷ್ಟರ ಮಟ್ಟಿಗೆ ಕಡಿಮೆಯಾಗುತ್ತದೆ.

ದಾವೆ ಹೂಡಿದ ದಿನದಿಂದ ಸಂಬಂಧಿಸಿದ ಸಾಲ ಖಾತೆಯ ಒಂದು ಪ್ರತ್ಯೇಕ ಕಡತ ಆರಂಭಿಸುವುದು ಅಗತ್ಯ. ಪ್ರಕರಣಕ್ಕೆ ಸಂಬಂಧಿಸಿದ ಎಲ್ಲ ಪತ್ರ ವ್ಯವಹಾರವನ್ನೂ ಈ ಕಡತದಲ್ಲಿರಿಸಿದ್ದರೆ ವಿವಿಧ ಹಂತಗಳಲ್ಲಿ ಎದುರಾಗುವ ಸಮಸ್ಯೆಗಳನ್ನು ಬಗೆಹರಿಸಲು ಅನುವಾಗುವಂತೆ ಪ್ರಕರಣದ ಎಲ್ಲ ಸಂಗತಿಗಳನ್ನೂ ಒಟ್ಟಾಗಿ ಅರಿತುಕೊಳ್ಳಲು ಸಾಧ್ಯವಾಗುತ್ತದೆ.

ವಾದಪತ್ರದ ಒಂದು ಪ್ರತಿಯನ್ನು ನಿಯಂತ್ರಣ ಕಛೇರಿಗೆ ಕಳಿಸಿ ವಕೀಲರ ಶುಲ್ಕವೇ ಮೊದಲಾದ ಖರ್ಚುಗಳ ಬಗೆಗೆ ವರದಿ ಮಾಡುವುದೂ ಅಗತ್ಯ.

## ಪ್ರಕರಣದ ವಿವಿಧ ಹಂತಗಳು

ನ್ಯಾಯಾಲಯದ ಪ್ರಕರಣಗಳು ಇತ್ಯರ್ಥವಾಗುವ ಮುಂಚಿನ ವಿವಿಧ ಹಂತಗಳನ್ನು ಪರಿಚಯ ಮಾಡಿಕೊಳ್ಳುವುದು ಒಳ್ಳೆಯದು.

1 ಸ್ಟಾಂಪ್ ಶುಲ್ಕ ಪಡೆದು ಪ್ರಕರಣವನ್ನು ದಾಖಲು ಮಾಡಿಕೊಳ್ಳುವುದು.

2 ಪ್ರತಿವಾದಿಗಳಿಗೆ ನ್ಯಾಯಾಲಯದ ಸಮನು ಕಳಿಸುವುದು.

3 ಪ್ರತಿವಾದಿಗಳಿಂದ ಲಿಖಿತ ಹೇಳಿಕೆ (written statement)

4 ವಿವಾದಾಂಶಗಳ ರೂಪಣೆ (framing of issues)

5 ಪ್ರಕರಣಕ್ಕೆ ಸಂಬಂಧಿಸಿದ ಸಾಕ್ಷಿಗಳು

6 ಎರಡೂ ಕಕ್ಷಿಗಳ ವಾದಗಳು (arguments)

ದಾವೆಯ ಮೊತ್ತದ ಶೇ. 10ರಷ್ಟನ್ನು ತೆರಬೇಕಾಗಿದ್ದು ಈ ಶುಲ್ಕವನ್ನು ಸ್ಟಾಂಪ್ ರೂಪದಲ್ಲಿ ಸಲ್ಲಿಸಬೇಕು. ಬ್ಯಾಂಕು ತನ್ನ ವಕೀಲರ ಮೂಲಕವೇ ಸ್ಟಾಂಪುಗಳನ್ನು ಕೊಳ್ಳುವುದು ಸಾಮಾನ್ಯ. ಈ ಪದ್ಧತಿ ವ್ಯಾವಹಾರಿಕವಾಗಿದ್ದರೂ ಸ್ಟಾಂಪ್ ಕೊಳ್ಳಲು ಪಡೆದ ಹಣವನ್ನು ವಕೀಲರು ಆ ಉದ್ದೇಶಕ್ಕೆ ಬಳಸದೆ ಬ್ಯಾಂಕುಗಳನ್ನು ವಂಚಿಸಿರುವ ಪ್ರಕರಣಗಳೂ ಬೆಳಕಿಗೆ ಬಂದಿವೆ. ಆದ್ದರಿಂದ ನಗದು ಹಣವನ್ನು ವಕೀಲರಿಗೆ ನೀಡಿದರೂ ಆ ಹಣ ಸ್ಟಾಂಪ್ ಶುಲ್ಕದ ರೂಪದಲ್ಲಿ ನ್ಯಾಯಾಲಯಕ್ಕೆ ಸಂದಿದೆಯೇ ಎಂದು ಖಾತರಿ ಮಾಡಿಕೊಳ್ಳಬೇಕು. ನಿಗದಿತ ಸ್ಟಾಂಪ್ ಶುಲ್ಕ ಸಲ್ಲಿಸಿ ವಾದಪತ್ರವನ್ನು ನ್ಯಾಯಾಲಯಕ್ಕೆ ಸಲ್ಲಿಸಿದರೆ ಪ್ರಕರಣವು ನ್ಯಾಯಾಲಯದಲ್ಲಿ ದಾಖಲಾಗುತ್ತದೆ. ಪ್ರಕರಣದ ಸಂಖ್ಯೆಯನ್ನು ಆದಷ್ಟು ಬೇಗ ತಿಳಿದುಕೊಂಡು ಅದನ್ನು ದಾವೆಗಳ ಪುಸ್ತಕದಲ್ಲಿ ದಾಖಲಿಸಿ ಮುಂದಿನ ಹಂತಕ್ಕೆ ಸಿದ್ಧವಾಗಬಹುದು.

ಪ್ರತಿವಾದಿಗಳಿಗೆ ನ್ಯಾಯಾಲಯ ಸಮನುಗಳನ್ನೇನೋ ಕಳಿಸುತ್ತದೆ. ಆದರೆ ವಿಳಾಸಗಳು ಸರಿಯಾಗಿಲ್ಲದಿದ್ದರೆ ಅದು ಜಾರಿಯಾಗಲಾರದು. ಆದ್ದರಿಂದ ಸಾಲಗಾರರ ಮತ್ತು ಎಲ್ಲ ಖಾತರಿದಾರರ ವಿವಿಧ ವಿಳಾಸಗಳನ್ನು ನ್ಯಾಯಾಲಯಕ್ಕೆ ಒದಗಿಸಿ ಪ್ರತಿವಾದಿಗಳಿಗೆ ಸಮನು ತಲುಪುವಂತೆ ಮಾಡಬೇಕಾಗುತ್ತದೆ. ಪ್ರತಿವಾದಿಗಳು ವಿಳಾಸ ಬದಲಿಸಿದ್ದಲ್ಲಿ ಬದಲಾದ ವಿಳಾಸ ಕಂಡುಹಿಡಿಯುವಂತೆ ಪ್ರಯತ್ನ ನಡೆಸಿದರೆ ಉತ್ತಮ. ಸಮನು ಜಾರಿಯಾಗದಿದ್ದರೆ ಪತ್ರಿಕಾ ಪ್ರಕಟಣೆಯ ಮೂಲಕ ಅಥವಾ ಟಾಂಟಾಂ ಮೂಲಕ ನ್ಯಾಯಾಲಯದ ಸಮನು ಜಾರಿಗೊಳಿಸುವ ಆಲೋಚನೆ ಮಾಡಬೇಕು. ಇದಕ್ಕಾಗಿ ನಿಗದಿತವಾದ ಶುಲ್ಕವನ್ನು ಸಲ್ಲಿಸಿ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿದರೆ ಸಾಕು.

ಇಲ್ಲದಿದ್ದರೆ ಈ ಆರಂಭದ ಹಂತದಲ್ಲೇ ವರ್ಷಗಳು ಉರುಳಿ ಹೋಗಬಹುದು.

ಪ್ರತಿವಾದಿಗಳಿಂದ ಲಿಖಿತ ಹೇಳಿಕೆ ಪಡೆಯುವುದು ಮುಂದಿನ ಹಂತ. ಬ್ಯಾಂಕಿನ ಪ್ರಕರಣಗಳು ಸಾಮಾನ್ಯವಾಗಿ ನೇರವಾದವು, ನಿಸ್ಸಂದಿಗ್ಧವಾದವು. ದಸ್ತೈವಜುಗಳಲ್ಲಿ ತೀವ್ರ ದೋಷಗಳಿರದಿದ್ದರೆ ತೀರ್ಪು ಬ್ಯಾಂಕಿನ ಕಡೆಗೇ ಆಗುವ ಸಂಭವಗಳು ಅಧಿಕ. ಆದ್ದರಿಂದ ಪ್ರತಿವಾದಿಗಳ ಒಂದು ಪ್ರಮುಖ ತಂತ್ರವೆಂದರೆ ವಿಳಂಬಮಾಡುವುದು. ಲಿಖಿತ ಹೇಳಿಕೆ ನೀಡಲು ಪ್ರತಿವಾದಿಗಳು ಸಮಯ ಕೇಳಬಹುದು. ಆದರೆ ಅದಕ್ಕೊಂದು ಮಿತಿ ಹಾಕಲು ಬ್ಯಾಂಕು ಮುಂದಾಗಬೇಕು. 1980ರಲ್ಲಿ ದಾಖಲಾದ ಪ್ರಕರಣವೊಂದರಲ್ಲಿ 1989ರ ವರೆಗೂ ಲಿಖಿತ ಹೇಳಿಕೆ ಸಲ್ಲಿಸಲಾಗಿರಲಿಲ್ಲ. ಇಂಥ ಸ್ಥಿತಿಗೆ ಬ್ಯಾಂಕಿನ ಮತ್ತು ಬ್ಯಾಂಕ್ ವಕೀಲರ ಅಲಕ್ಷ್ಯವೇ ಕಾರಣ. ಸಾಧಾರಣವಾಗಿ ಲಿಖಿತ ಹೇಳಿಕೆ ಸಲ್ಲಿಸಲು ಎರಡು ತಿಂಗಳಿಗಿಂತ ಹೆಚ್ಚು ಸಮಯ ಅಗತ್ಯವಾಗುವುದಿಲ್ಲ.

ಮುಂದಿನ ಹಂತ ವಿವಾದಾಂಶಗಳ ರೂಪಣೆ. ಬ್ಯಾಂಕಿನ ವಾದಪತ್ರ ಮತ್ತು ಪ್ರತಿವಾದಿಯ ಲಿಖಿತ ಹೇಳಿಕೆಗಳನ್ನು ಆಧರಿಸಿ ಪ್ರಕರಣಕ್ಕೆ ಸಂಬಂಧಿಸಿದ ವಿವಾದಾಂಶಗಳನ್ನು ರೂಪಿಸುವುದು (framing of issues) ನ್ಯಾಯಾಲಯದ ಕೆಲಸ. ಈ ಹಂತದಲ್ಲಿಯೂ ವಿಳಂಬವಾಗದಂತೆ ಎಚ್ಚರ ವಹಿಸಬೇಕಾಗಬಹುದು. ಸಾಕ್ಷ್ಯಾಧಾರಗಳನ್ನು ನ್ಯಾಯಾಲಯದ ಮುಂದಿಡುವ ಹಂತವೂ ಪ್ರಕರಣದ ನಿರ್ಣಯದ ದೃಷ್ಟಿಯಿಂದ ಮಹತ್ವಪೂರ್ಣವಾದದ್ದು—ವಾದಿಯ (ಎಂದರೆ ಬ್ಯಾಂಕಿನ) ಕಡೆಯಿಂದ ನೀಡಬೇಕಾದ ಸಾಕ್ಷಿಗಳನ್ನು ಕ್ಷಿಪ್ರವಾಗಿ ಕರೆತಂದು ಸಾಕ್ಷ್ಯ ನೀಡಿಸುವುದು ಅಗತ್ಯ. ಈ ಘಟ್ಟದಲ್ಲಿ ಸಾಲಗಾರನು ಸಾಲಪಡೆದ ಸಂದರ್ಭದಲ್ಲಿ ಶಾಖೆಯಲ್ಲಿ ಕೆಲಸ ಮಾಡುತ್ತಿದ್ದ ಅಧಿಕಾರಿಯೇ ಬಂದು ಸಾಕ್ಷ್ಯ ನೀಡಬೇಕೆಂದೋ, ಶಾಖಾ ವ್ಯವಸ್ಥಾಪಕರೇ ಸಾಕ್ಷ್ಯ ನೀಡಬೇಕೆಂದೋ ಒತ್ತಾಯಿಸುವುದುಂಟು. ಆದರೆ ಎಲ್ಲ ಸಂದರ್ಭಗಳಲ್ಲೂ ಇಂಥ ಒತ್ತಾಯಕ್ಕೆ ಮಣಿಯಬೇಕಾದ್ದಿಲ್ಲ. ಬ್ಯಾಂಕಿನ ವಕೀಲರು ಜಾಗ್ರತೆ ವಹಿಸಿದರೆ ಅನಗತ್ಯ ಸಾಕ್ಷಿಗಳನ್ನು ಕರೆತರುವುದನ್ನು ತಪ್ಪಿಸಿ ಬ್ಯಾಂಕ್ ಶಾಖೆಯಲ್ಲಿ ಸದ್ಯ ಕೆಲಸ ಮಾಡುತ್ತಿರುವ ಅಧಿಕಾರಿಗಳಿಂದಲೇ ಸಾಕ್ಷ್ಯ ನೀಡಿಸಬಹುದು. ಪ್ರತಿವಾದಿಯು ತಾನು ಸಾಲ ಪಡೆದದ್ದನ್ನೇ ಅಲ್ಲಗಳೆದು ದಸ್ತೈವಜುಗಳಲ್ಲಿನ ಸಹಿ ತನ್ನದಲ್ಲವೆಂದು ಹೇಳಿಕೆ ನೀಡಿದ್ದು ನ್ಯಾಯಾಲಯವು ಈ ಹೇಳಿಕೆಯನ್ನು ವಿವಾದಾಂಶವನ್ನಾಗಿ ಸ್ವೀಕರಿಸಿದ್ದರೆ ಮಾತ್ರ ನಿರ್ದಿಷ್ಟ ಸಾಕ್ಷಿಗಳನ್ನು ಕರೆಸುವುದು ಅನಿವಾರ್ಯವಾಗಬಹುದು. ಸಾಕಷ್ಟು ಮುನ್ಸೂಚನೆ ನೀಡದಿದ್ದರೆ ಸಾಕ್ಷ್ಯ ನೀಡಲು ಅಧಿಕಾರಿಗಳನ್ನು ನಿಯೋಜಿಸುವುದು ಕಷ್ಟವಾಗಬಹುದು. ಸಾಕ್ಷ್ಯ ನೀಡಲು ಬೇರೆಡೆಯಿಂದ ಬರುವ ಅಧಿಕಾರಿಗೆ ಪ್ರಕರಣದ ಬಗೆಗೆ ಸಂಕ್ಷೇಪವಾಗಿ ವಿವರಿಸಿ ಹೇಳಿ ಸಂಬಂಧಿಸಿದ ಕಾಗದ ಪತ್ರಗಳನ್ನು ನೋಡಲು ಕೊಡಬೇಕು. ಅಂಥ ಅಧಿಕಾರಿ ಸಾಕ್ಷ್ಯದ ಕಟಕಟೆಗೆ ಹೋಗುವ ಮೊದಲೇ ಬ್ಯಾಂಕಿನ ವಕೀಲರೊಡನೆ ಸಮಾಲೋಚನೆ ನಡೆಸಿರಬೇಕಾದ್ದು ಮುಖ್ಯ. ಇಲ್ಲದಿದ್ದರೆ ಆತ ನೀಡುವ ಸಾಕ್ಷ್ಯದಿಂದ ಬ್ಯಾಂಕಿನ ಹಿತಕ್ಕೆ ಧಕ್ಕೆಯೂಗಬಹುದು. ಸಮರ್ಪಕವಾಗಿ ಸಾಕ್ಷ್ಯ ನೀಡದಿದ್ದರೆ ಪ್ರಕರಣದ ಇತ್ಯರ್ಥ ವಿಳಂಬವಾಗುವುದು ಸಾಮಾನ್ಯ ಸಂಗತಿ.

ತೀರ್ಪು ನೀಡುವ ಮುನ್ನಿನ ಅಂತಿಮ ಘಟ್ಟ ಎರಡೂ ಕಕ್ಷಿಗಳ ವಾದಗಳು. ಪ್ರತಿವಾದಿಯು ವಕೀಲರನ್ನು ನೇಮಿಸಿ ಪ್ರಕರಣವನ್ನು ಪ್ರತಿವಾದಿಸದಿದ್ದರೆ (contest) ಈ ಹಂತ ಬರುವುದೇ ಇಲ್ಲ. ಏಕಪಕ್ಷೀಯವಾಗಿ ತೀರ್ಪು ನೀಡುವುದು ನ್ಯಾಯಾಲಯಕ್ಕೆ ಅನಿವಾರ್ಯವಾಗುತ್ತದೆ. ಪ್ರಕರಣವು ಪ್ರತಿವಾದಿತವಾದರೆ ಬ್ಯಾಂಕಿನ ಪರವಾದ ವಾದಗಳನ್ನು ಬ್ಯಾಂಕಿನ ವಕೀಲರು ಮಂಡಿಸಬೇಕಾಗುತ್ತದೆ. ಬ್ಯಾಂಕ್ ವಕೀಲರು ತಮ್ಮ ಕಿರಿಯ ವಕೀಲರನ್ನೇ (Junior) ನ್ಯಾಯಾಲಯಕ್ಕೆ ಕಳಿಸುತ್ತಾ ಹೋದರೆ ಪ್ರಕರಣ ಬೇಗ ಇತ್ಯರ್ಥವಾಗದೆ ಮುಂದೂಡಲ್ಪಡಬಹುದು. ಬ್ಯಾಂಕಿನ ವಕೀಲರು ಗೈರುಹಾಜರಾಗಿದ್ದು ನ್ಯಾಯಾಲಯವು ಏಕಪಕ್ಷೀಯವಾಗಿ ಬ್ಯಾಂಕಿನ ವಿರುದ್ಧ ತೀರ್ಪು ಕೊಟ್ಟಿರುವ ಉದಾಹರಣೆಗಳೂ ಇವೆ. ಇದು ಅಲಕ್ಷ್ಯದ ಫಲ.

ಎಲ್ಲ ಹಂತಗಳಲ್ಲೂ ಕನಿಷ್ಠ ಎಚ್ಚರವನ್ನಾದರೂ ವಹಿಸಿದರೆ ತೀರ್ಪು ಬ್ಯಾಂಕಿನ ಪರವಾಗುವುದರಲ್ಲಿ ಸಂದೇಹವೇ ಇಲ್ಲ.

## ಶೀಘ್ರ ಇತ್ಯರ್ಥಕ್ಕೆ ಸಲಹೆಗಳು

ನ್ಯಾಯಾಲಯದಲ್ಲಿ ಪ್ರಕರಣ ಮುಂದುವರಿಯುತ್ತಿದ್ದ ಮಾತ್ರಕ್ಕೆ ಸಾಲ ತೀರಿಸಲು ಸಾಲಗಾರನ ಮೇಲೆ ಒತ್ತಡ ಹಾಕದಂತಾಗಲಾರದು. ಈ ಮಧ್ಯೆ ಸಾಲಗಾರನು ತನ್ನ ಆಸ್ತಿಯನ್ನು ಮಾರಲು ಯತ್ನಿಸಬಹುದು. ಈ ಯತ್ನವನ್ನು ಮೊಳಕೆಯಲ್ಲೇ ಚಿವುಟಬೇಕು. ಸಾಲಗಾರನ ಬಳಿ ಜಪ್ತಿ ಮಾಡಲು ಸಾಧ್ಯವಾಗುವಂಥ ಆಸ್ತಿಗಳಿದ್ದಲ್ಲಿ (ಉದಾ: ವಾಹನ ಇತ್ಯಾದಿ) ನ್ಯಾಯಾಲಯದ ಜಪ್ತಿ ಆದೇಶ (attachment order) ತರಲು ಯತ್ನಿಸಬೇಕು. ಹೀಗೆ ಮಾಡಿದಾಗ ಸಾಲ ಮರುಪಾವತಿ ಮಾಡುವತ್ತ ಸಾಲಗಾರ ಆಲೋಚಿಸುವಂತಾಗಬಹುದು.

ನ್ಯಾಯಾಲಯ ಅಸ್ಪಷ್ಟ ಪ್ರತಿವಾದಗಳನ್ನು ಒಪ್ಪದಿರುವಂತೆ ನೋಡಿಕೊಳ್ಳುವುದು ವಕೀಲರ ಜವಾಬ್ದಾರಿ. ಪ್ರತಿವಾದಿ ಕುಂಟು ನೆಪಗಳನ್ನೊಡ್ಡುತ್ತ ಪ್ರಕರಣ ಮುಂದೂಡುವುದನ್ನು ತಡೆದರೆ ಶೀಘ್ರ ಇತ್ಯರ್ಥಕ್ಕೆ ಅನುವಾಗುತ್ತದೆ.

ನ್ಯಾಯಾಲಯಕ್ಕೆ ಸಲ್ಲಿಸುವ ದಸ್ತೈವಜುಗಳು ಎಲ್ಲ ರೀತಿಯಲ್ಲೂ ಸಮರ್ಪಕವಾಗಿದ್ದರೆ ಪ್ರಕರಣದ ಇತ್ಯರ್ಥ ಸುಗಮವಾಗುತ್ತದೆ. ಸಂಪೂರ್ಣವಾಗಿ ಅಥವಾ ಭಾಗಶಃ ಖಾಲಿಯಾದ ದಸ್ತೈವಜುಗಳು ಪ್ರತಿವಾದಿಗೆ ಗೆಲ್ಲುವ ಅವಕಾಶ ಕೊಡಬಹುದು. ಅಥವಾ ಪ್ರಬಲವಾದವುಗಳನ್ನು ಮುಂದೊಡ್ಡಿ ಪ್ರಕರಣ ಇತ್ಯರ್ಥವಾಗುವುದನ್ನು ಮುಂದೂಡಬಹುದು. ದಸ್ತೈವಜುಗಳನ್ನು ಚೆನ್ನಾಗಿ ಪರಿಶೀಲಿಸಿ ಸಾಧ್ಯವಾದಷ್ಟುಮಟ್ಟಿಗೆ ನೇರ್ಪಡಿಸಿಯೇ ನ್ಯಾಯಾಲಯದಲ್ಲಿ ಹಾಜರುಪಡಿಸಬೇಕಾದ್ದು ಮುಖ್ಯ. ದೋಷಪೂರ್ಣ ದಸ್ತೈವಜುಗಳಿಂದ ತೊಂದರೆಯೇ ಅಧಿಕ. ಉದಾ: 'ಅಡಮಾನ ಮಾಡಲು ಒಪ್ಪಂದ' (agreement to mortgage) ಯಾವ ಹಕ್ಕನ್ನೂ ನೀಡುವುದಿಲ್ಲ. ಇಂಥ ಒಪ್ಪಂದವನ್ನು ಆಧರಿಸಿದ ಪ್ರಕರಣದಲ್ಲಿ ಬ್ಯಾಂಕ್ ಜಯಗಳಿಸಿದರೂ ಆಸ್ತಿಯನ್ನು ವಶಪಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ಉದರಿ ಖಾತರಿ ನಿಗಮದಿಂದ ಬರಬೇಕಾದ ಹಣಕ್ಕೆ ಕ್ಲೇಮು ಸಲ್ಲಿಸಲು ಪ್ರಕರಣ ಇತ್ಯರ್ಥವಾಗುವವರೆಗೆ ಕಾಯಬೇಕಾಗಿಲ್ಲ. ಪ್ರಕರಣ ದಾಖಲಾಗುವ ಹೊತ್ತಿಗೇ ಕ್ಲೇಮು ಸಲ್ಲಿಸಿ ಆದಷ್ಟು ಶೀಘ್ರವಾಗಿ ಕ್ಲೇಮು ಹಣ ಪಡೆಯಲು ಯತ್ನಿಸಬೇಕು. ದಾವೆ ಹೂಡಿದ ಖಾತೆಗಳ ಸಂಬಂಧದಲ್ಲಿ ಉದರಿ ಖಾತರಿ ನಿಗಮದಿಂದ ಕ್ಲೇಮು ಹಣ ಪಡೆಯುವುದು ಅನಗತ್ಯವಾಗಿ ವಿಳಂಬವಾಗುತ್ತಿದೆ. ಈ ಸ್ಥಿತಿ ಬದಲಾಗಬೇಕು.

## ಸತತ ಸಂಪರ್ಕ

ಬ್ಯಾಂಕ್ ವಕೀಲರೊಂದಿಗೆ ಸತತ ಸಂಪರ್ಕವಿರಿಸಿಕೊಂಡು ವಿವಿಧ ಪ್ರಕರಣಗಳನ್ನು ಕುರಿತ ಈಚಿನ ಮಾಹಿತಿಗಳನ್ನು ಸಂಗ್ರಹಿಸುತ್ತಿರಬೇಕು. ಹಾಗೇ, ಪ್ರಕರಣದ ಇತ್ಯರ್ಥಕ್ಕೆ ಅಗತ್ಯವಾಗುವ ಮಾಹಿತಿಯನ್ನು ವಕೀಲರಿಗೆ/ನ್ಯಾಯಾಲಯಕ್ಕೆ ಒದಗಿಸುತ್ತಿರಬೇಕು. ವಕೀಲರಿಗೆ ಸಲ್ಲಬೇಕಾದ ಶುಲ್ಕವನ್ನು ಸಕಾಲದಲ್ಲಿ ಪಾವತಿ ಮಾಡುವುದೂ ಮುಖ್ಯವೇ. ಹೀಗೆ ಪಾವತಿಯಾದ ಶುಲ್ಕ, ಕೋರ್ಟ್ ಶುಲ್ಕ ಮುಂತಾದ ಎಲ್ಲ ವೆಚ್ಚಗಳನ್ನು ಸಾಲಗಾರನ ಖಾತೆಗೆ ಖರ್ಚು ಹಾಕಿ ಪೂರ್ಣ ವಿವರಗಳನ್ನು ಖಾತೆಯಲ್ಲಿ ದಾಖಲಿಸಬೇಕು. ಸಾಲದ ಮೊತ್ತ ದೊಡ್ಡದಾಗಿದ್ದರೆ (ಉದಾ: ಎರಡು ಲಕ್ಷ ರೂ.ಗಳಿಗಿಂತ ಹೆಚ್ಚು) ವಕೀಲರು ಒಬ್ಬ ಕಿರಿಯ ವಕೀಲರನ್ನು (Junior) ನೇಮಿಸಿಕೊಳ್ಳಬಹುದು. ವಕೀಲರ ಶುಲ್ಕದ ಮೂರನೇ ಒಂದು ಭಾಗದಷ್ಟು ಹಣವನ್ನು ಕಿರಿಯ ವಕೀಲರ ಶುಲ್ಕವಾಗಿ ಪಾವತಿ ಮಾಡಬಹುದು. ಆದರೆ ಹೀಗೆ ನೇಮಕ ಮಾಡಿಕೊಳ್ಳಲು ನಿಯಂತ್ರಣ ಪ್ರಾಧಿಕಾರದ ಮಂಜೂರಾತಿ ಅಗತ್ಯ. ಬ್ಯಾಂಕಿನ ಉದ್ದೇಶ ಸಾಧನೆಗೆ ವಕೀಲರು ನೆರವಾಗದಿದ್ದಲ್ಲಿ ಬೇರೊಬ್ಬ ದಕ್ಷ ವಕೀಲರನ್ನು ಆರಿಸಿಕೊಳ್ಳುವ ಹಕ್ಕು ಬ್ಯಾಂಕಿಗೆ ಇದ್ದೇ ಇದೆ. ಆದರೆ ಇದು ಕೊನೆಯ ಅಸ್ತ್ರ. ಗ್ರಾಮೀಣ ಪ್ರದೇಶಗಳಲ್ಲಿ ಈ ಹಕ್ಕು ಚಲಾಯಿಸಲು ಸಾಧ್ಯವಾಗದಿರಬಹುದು. ಶಾಖೆಯ ಅಧಿಕಾರಿಗಳು ಮತ್ತು ವಕೀಲರು ಪರಸ್ಪರರಲ್ಲಿ ವಿಶ್ವಾಸವಿಟ್ಟು ಬ್ಯಾಂಕಿನ ಹಿತರಕ್ಷಣೆಗಾಗಿ ಸರ್ವಪ್ರಯತ್ನ ಮಾಡಬೇಕು.

ವಿವಿಧ ನ್ಯಾಯಾಲಯ ಪ್ರಕರಣಗಳು ಯಾವ ಯಾವ ಹಂತದಲ್ಲಿವೆಯೆಂಬುದನ್ನು ವಿವರವಾಗಿ ತಿಳಿಸುವ ತಃಖ್ತೆಗಳನ್ನು ಆಗಾಗ್ಗೆ ವಕೀಲರಿಂದ ಪಡೆದು ನಿಯಂತ್ರಣ ಕಛೇರಿಗೆ ಕಳಿಸಬೇಕು. ಅಗತ್ಯವಾದೆಡೆ ಮಾರ್ಗದರ್ಶನವನ್ನೂ ಪಡೆಯಬಹುದು.

## ತೀರ್ಪು ಅಂತಿಮವಲ್ಲ

ನ್ಯಾಯಾಲಯ ನೀಡಿದ ತೀರ್ಪೇ ಅಂತಿಮವೆಂದು ಭಾವಿಸಬಾರದು. ಬ್ಯಾಂಕಿನ ತೀರ್ಪಿನಿಂದ ಸಮಾಧಾನವಾಗದಿದ್ದಲ್ಲಿ ತೀರ್ಪನ್ನು ಪ್ರಶ್ನಿಸಬಹುದು. ಉದಾ : ಅಡಮಾನ ದಾವೆಗಳಿಗೆ ಸಂಬಂಧಿಸಿದ ಪೂರ್ವಭಾವಿ ಡಿಕ್ರಿಗಳಲ್ಲಿ ಕಂತು ಪಾವತಿಗೆ ಅವಕಾಶವಿದ್ದರೆ ಅದನ್ನು ಪ್ರಶ್ನಿಸಬಹುದು. ತೀರ್ಪು ಬ್ಯಾಂಕಿನ ಪರವಾಗಿ ಇಲ್ಲದಿದ್ದರೆ ಮೇಲಿನ ನ್ಯಾಯಾಲಯಕ್ಕೇ ಅಪೀಲು ಸಲ್ಲಿಸಬಹುದು.

ತೀರ್ಪು ಬಂದ ಕೂಡಲೇ ಡಿಕ್ರಿ ಪ್ರತಿಗಳನ್ನು ಪಡೆದು ಅನುಷ್ಠಾನಕ್ಕೆ ಮನವಿ ಸಲ್ಲಿಸಬೇಕು. ಹಾಗೆ ಸಲ್ಲಿಸುವಾಗ ಸಾಲಗಾರನ ಚರಾಸ್ತಿ ಸ್ಥಿರಾಸ್ತಿಗಳನ್ನು ಕುರಿತ ಮಾಹಿತಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಬೇಕು. ಡಿಕ್ರಿ ಪಡೆದ 12 ವರ್ಷಗಳೊಳಗಾಗಿ ಅಮಲ್ಜಾರಿ ಮನವಿಗಳನ್ನು (execution petition) ಸಲ್ಲಿಸಬಹುದಾದರೂ ವೃಥಾ ಕಾಲಹರಣ ಮಾಡುವ ಅಗತ್ಯವಿಲ್ಲ. ಡಿಕ್ರಿಯಲ್ಲಿ ಆದೇಶಿಸಿದ ರೀತಿಯಲ್ಲಿ ಮರುಪಾವತಿ ಬಾರದಿದ್ದರೆ ಅಮಲ್ಜಾರಿ ಮನವಿ ಸಲ್ಲಿಕೆಯಲ್ಲಿ ವಿಳಂಬವಾಗಬಾರದು. ಅಮಲ್ಜಾರಿ ಆದೇಶ ಪಡೆದ ಮೇಲೂ ಹಲವು ತೊಡಕುಗಳುಂಟು. ಎಲ್ಲ ಕಾನೂನಿನ ಕ್ರಮಗಳೂ ವಸೂಲಾತಿಯಲ್ಲಿ ಪರಿಣಮಿಸದೆ ನಿಷ್ಫಲಗೊಳ್ಳುವುದನ್ನು ಬಹುತೇಕ ಸಂದರ್ಭದಲ್ಲಿ ಕಾಣುತ್ತೇವೆ. ಮುಖ್ಯವಾಗಿ ಆಸ್ತಿಗಳನ್ನು ಜಪ್ತಿ ಮಾಡುವುದು ಕಷ್ಟ. ಕೃಷಿ ಭೂಮಿಯಾದರೆ ಕೊಳ್ಳುವವರೂ ಮುಂದೆ ಬಾರರು. ಇಂಥಲ್ಲಿ ನಿಗದಿತ ಶುಲ್ಕ ಪಾವತಿ ಮಾಡಿ ವೃತ್ತಿನಿರತರ ನೆರವು ಪಡೆಯಬಹುದು. ಈ ದಿಶೆಯಲ್ಲಿ ಹೆಚ್ಚು ಪ್ರಯತ್ನ ನಡೆದಿಲ್ಲ.

## ಇತರ ವಿಧಾನಗಳು

ಕೃಷಿ ಭೂಮಿಯ ಹರಾಜು ನಡೆಸಿದರೆ ಕೊಳ್ಳುವವರು ಮುಂದೆ ಬಾರದಿರುವ ಸಂಭವವಿದೆ. ಸ್ವತಃ ಬ್ಯಾಂಕ್ ಕೂಡ ಈ ಹರಾಜಿನಲ್ಲಿ ಭಾಗವಹಿಸಬಹುದು. ಆದರೆ ಬ್ಯಾಂಕ್ ಅಡಮಾನದಾರ (mortgagee)ನಾಗಿರುವುದರಿಂದ ಇದಕ್ಕೆ ನ್ಯಾಯಾಲಯದ ಅನುಮತಿ ಬೇಕಾಗುತ್ತದೆ. ಒಂದು ವೇಳೆ ಭೂಮಿಯನ್ನು ಕೊಂಡರೂ ಏನೂ ಮಾಡುವಂತಿಲ್ಲ. ಅದೇ ರೀತಿ ಒಂದು ವರ್ಷದ ಮಟ್ಟಿಗೆ ಭೂಮಿಯ ಸಾಗುವಳಿ ಹಕ್ಕನ್ನು ಹರಾಜು ಮಾಡಬಹುದು. ಹರಾಜಿನಲ್ಲಿ ಭಾಗವಹಿಸಿ ಆ ಸಾಗುವಳಿ ಹಕ್ಕನ್ನು ಕೂಡ ಬ್ಯಾಂಕೇ ಬಿಡ್ಡು ಮಾಡಿ ಪಡೆಯಬಹುದು. ಅನಂತರ ಆ ಹಕ್ಕನ್ನು ಮತ್ತೊಬ್ಬರಿಗೆ ವರ್ಗಾಯಿಸಿ ಹಣ ಪಡೆಯಬಹುದು. ಈ ಕ್ರಮವೂ ಕೇವಲ ಶುಷ್ಕ ಚರ್ಚೆಯ ವಿಷಯವಾಗಿ ಉಳಿದಿದೆಯಲ್ಲದೆ ವ್ಯಾವಹಾರಿಕವಾಗಿ ಅಲ್ಲ.

ಹರಾಜಿನಲ್ಲಿ ಕೃಷಿ ಭೂಮಿ ಕೊಳ್ಳಲು ಬಿಡ್ಡುದಾರರು ಮುಂದೆ ಬಾರದಿದ್ದರೆ ಸರಕಾರದ ಪರವಾಗಿ ಅಂಥ ಭೂಮಿ ಕೊಳ್ಳಲು ವಿಶೇಷ ತಹಸೀಲ್ದಾರರಿಗೆ ಅಧಿಕಾರವಿರುತ್ತದೆ. ಆದರೂ ಬ್ಯಾಂಕುಗಳು ಈ ಸೌಲಭ್ಯವನ್ನು ಬಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲದಿರುವುದು ದುರ್ದೈವ. ತಹಸೀಲ್ದಾರರು ತಮ್ಮ ಈ ವಿಶೇಷಾಧಿಕಾರವನ್ನು ಪ್ರಯೋಗಿಸಲು ಮುಂದಾಗುವುದು ವಿರಳ.

ಡಿಕ್ರಿ ಆದಮೇಲೂ ಉದ್ದೇಶಪೂರ್ವಕವಾಗಿ ಮರುಪಾವತಿ ಮಾಡದಿರುವ ಬಾಕಿದಾರನನ್ನು ಬಂಧಿಸಿಡಲು ಬಂಧನದ ವಾರೆಂಟ್ ಜಾರಿ ಮಾಡಿಸಲು ಯತ್ನಿಸಬಹುದು. ಹಾಗೆ ಮಾಡಬೇಕಾದರೆ ನಿಯಂತ್ರಣ ಕಛೇರಿಯ ಪೂರ್ವಾನುಮತಿ ಅಗತ್ಯ. ಇದು ತುಂಬ ಸೂಕ್ಷ್ಮ ವಿಷಯವಾದ್ದರಿಂದ ಬ್ಯಾಂಕಿನ ಹಿತಕ್ಕೆ ಧಕ್ಕೆಯಾಗದಂತೆ ಈ ಕ್ರಮವನ್ನು ಕೇವಲ ಬೆದರಿಕೆಯ ತಂತ್ರವಾಗಿ ಬಳಸಿಕೊಳ್ಳಬೇಕು. ಇಲ್ಲದಿದ್ದರೆ ಸಾಲಗಾರನನ್ನು ಕಾರಾಗೃಹಕ್ಕೆ ಕಳಿಸುವುದರಿಂದ ಬ್ಯಾಂಕಿಗೆ ಲಾಭವಾಗುವುದರ ಬದಲು ನಷ್ಟವೇ ಆಗಬಹುದು.

ಕೆಲವೊಮ್ಮೆ ಪ್ರಕರಣವು ಚಾಲ್ತಿಯಲ್ಲಿದ್ದಾಗ ಪ್ರತಿವಾದಿಯು ಬ್ಯಾಂಕಿನೊಡನೆ ರಾಜಿ ಮಾಡಿಕೊಳ್ಳಲು ಇಚ್ಛಿಸುವುದುಂಟು. ಈಚೆಗೆ ಬ್ಯಾಂಕುಗಳು ರಾಜಿ ಮಾಡಿಕೊಳ್ಳಲು ಹೆಚ್ಚಿನ ಆಸಕ್ತಿ ತೋರುತ್ತಿವೆ. ಒಟ್ಟಾರೆಯಾಗಿ ಬ್ಯಾಂಕಿಗೆ ಅನುಕೂಲವಾಗುವಂಥ ಷರತ್ತುಗಳುಳ್ಳ ರಾಜೀ ಸೂತ್ರವನ್ನು ಮಾತ್ರ ಒಪ್ಪಲಾಗುತ್ತದೆ. ಯಾವುದು ಅನುಕೂಲಕರ ಎಂಬುದು ಆಯಾ ಪ್ರಕರಣದ ವಿವರಗಳನ್ನು ಅವಲಂಬಿಸಿರುತ್ತದೆ. ಉದಾ : ಇಡೀ ಸಾಲವನ್ನು ಒಂದೇ ಕಂತಿನಲ್ಲಿ ಮರುಪಾವತಿ ಮಾಡುವುದಾದರೆ ಬಡ್ಡಿ ಮನ್ನಾ ಮಾಡಲು ಅಥವಾ ಸರಳ ಬಡ್ಡಿ ವಿಧಿಸಲು ಬ್ಯಾಂಕ್ ಒಪ್ಪಬಹುದು. ಅಥವಾ ಸಾಲದ ಒಟ್ಟು ಹಣದಲ್ಲಿ ಅರ್ಧಭಾಗವನ್ನು ತತ್ಕ್ಷಣ ನಗದಾಗಿ ಪಾವತಿ ಮಾಡಿದಲ್ಲಿ ಉಳಿದರ್ಧವನ್ನು ಮೂರು ವಾರ್ಷಿಕ ಕಂತುಗಳಲ್ಲಿ ಮರುಪಾವತಿ ಮಾಡಲು ಅವಕಾಶ ಕಲ್ಪಿಸಬಹುದು.

ಇಂಥ ರಾಜಿ ಮಾಡಿಕೊಳ್ಳುವ ಅಧಿಕಾರ ಶಾಖಾ ವ್ಯವಸ್ಥಾಪಕರಲ್ಲಿ ನಿಹಿತವಾಗಿರುವುದಿಲ್ಲವೆಂಬುದು ಒಂದು ಸಮಸ್ಯೆ. ಪ್ರತಿವಾದಿಯೊಂದಿಗೆ ಚರ್ಚಿಸಿ ರಾಜೀಸೂತ್ರದ ಕರಡನ್ನು ಸಿದ್ಧಪಡಿಸಿ ಅದಕ್ಕೆ ನಿಯಂತ್ರಣ ಕಛೇರಿಯ ಒಪ್ಪಿಗೆ ಪಡೆದಮೇಲೆ ನ್ಯಾಯಾಲಯದಲ್ಲಿ ರಾಜಿಗೆ ಒಪ್ಪಬಹುದು. ಇಂಥ ಸಂದರ್ಭದಲ್ಲಿ ನ್ಯಾಯಾಲಯವು ರಾಜೀ ಡಿಕ್ರಿ (compromise decree) ನೀಡುತ್ತದೆ ಮತ್ತು ಪಾವತಿಯಾಗಿರುವ ನ್ಯಾಯಾಲಯ ಶುಲ್ಕದ ಅರ್ಧ ಮೊತ್ತವನ್ನು ಹಿಂದಿರುಗಿಸುತ್ತದೆ. ವಕೀಲರ ಶುಲ್ಕದಲ್ಲೂ ಉಳಿತಾಯವಾಗುತ್ತದೆ. ಕೃಷಿ ಮತ್ತು ಕೈಗಾರಿಕಾ ಸಾಲಗಳ ಸಂದರ್ಭದಲ್ಲಿ ಇಂಥ ರಾಜೀ ಸೂತ್ರಗಳಿಗೆ ಹೆಚ್ಚು ಮಹತ್ವ ನೀಡಲಾಗುತ್ತಿದೆ.

## ಎರಡು ಅಧಿನಿಯಮಗಳು

ಸಣ್ಣ ಮೊತ್ತದ ಸಾಲಗಳಿಗೆ ನ್ಯಾಯಾಲಯದಲ್ಲಿ ದಾವೆ ಹೂಡುವುದು ವ್ಯಾವಹಾರಿಕವಲ್ಲವೆನ್ನಿಸಬಹುದು. ಏಕೆಂದರೆ ನ್ಯಾಯಾಲಯದ ದಾವೆಯಲ್ಲಿ ವೆಚ್ಚ ಅಧಿಕ ಮತ್ತು ಸಣ್ಣ ಸಾಲಗಳಲ್ಲಿ ನ್ಯಾಯಾಲಯದ ಡಿಕ್ರಿ ಇದ್ದರೂ ವಸೂಲಾತಿ ಕಷ್ಟ. ಇಂಥ ಸಂದರ್ಭಗಳಲ್ಲಿ ನ್ಯಾಯಾಲಯದ ಮೊರೆ ಹೋಗದೆ ಕರ್ನಾಟಕ ರಾಜ್ಯ ಸರ್ಕಾರದ ಎರಡು ಅಧಿನಿಯಮಗಳನ್ನು ಬ್ಯಾಂಕುಗಳು ತಮ್ಮ ಸಾಲವಸೂಲಿಗೆ ಬಳಸಿಕೊಳ್ಳಬಹುದು :

1 ಕರ್ನಾಟಕ ಸಾರ್ವಜನಿಕ ಹಣ ವಸೂಲಿ ಅಧಿನಿಯಮ (KPMRA).
2 ಕರ್ನಾಟಕ ಕೃಷಿ ಉದರಿ ಮತ್ತು ಇತರ ವಿವಿಧ ಉಪಬಂಧಗಳ ಅಧಿನಿಯಮ (KACOMPA).

ಇವುಗಳಲ್ಲಿ ಮೊದಲನೆಯದು ಸರ್ಕಾರಿ ಯೋಜನೆಗಳಲ್ಲಿ ನೀಡಲಾದ ಎಲ್ಲ ಸಾಲಗಳಿಗೂ ಅನ್ವಯಿಸುತ್ತದೆ ಎರಡನೆಯದು ಎಲ್ಲ ರೀತಿಯ ಕೃಷಿ ಸಾಲಗಳಿಗೂ ಅನ್ವಯವಾಗುತ್ತದೆ.

ಸಾಮಾನ್ಯವಾಗಿ ಸಣ್ಣ ಮೊತ್ತದ ಸಾಲಗಳ ವಸೂಲಾತಿಗಾಗಿ ಈ ಅಧಿನಿಯಮಗಳನ್ನು ಬಳಸಿಕೊಳ್ಳಲಾಗುತ್ತಿದೆ. ನ್ಯಾಯಾಲಯದ ಪ್ರಕರಣಗಳಿಗಿಂತ ಇವು ಭಿನ್ನ. ಹಾಗೂ ತೌಲನಿಕವಾಗಿ ಸಾಕಷ್ಟು ಸರಳ. ಸಹಕಾರ ಸಂಘಗಳ ಸಹಾಯಕ ನಿಬಂಧಕರಲ್ಲಿ (Asst. Registrar of Co-op Societies) ಫಿರ್ಯಾದು ಸಲ್ಲಿಸಿ ಅವರಿಂದಲೇ ಈ ಪ್ರಕರಣಗಳ ಡಿಕ್ರಿ ಪಡೆಯಬಹುದು. ಇವು ಕೂಡ ನ್ಯಾಯಾಲಯದ ಡಿಕ್ರಿಗಳಂತೆಯೇ ಆದರೂ ವಾಸ್ತವವಾಗಿ ವಸೂಲಾತಿಯನ್ನು ಹೆಚ್ಚಿಸುವಲ್ಲಿ ವಿಫಲವಾಗಿವೆ. ಸಹಾಯಕ ನಿಬಂಧಕರೂ ಪ್ರತಿವಾದಿಗೆ ಕಳಿಸಬೇಕಾದ ನೋಟೀಸನ್ನು ಅವರ ಹೆಸರಿನಲ್ಲಿ ಬ್ಯಾಂಕುಗಳೇ ಕಳಿಸಬೇಕೆಂದರೆ ಪರಿಸ್ಥಿತಿ ಏನೆಂಬುದನ್ನು ಊಹಿಸಿಕೊಳ್ಳುವುದು ಕಷ್ಟವಲ್ಲ.

## ಪ್ರತ್ಯೇಕ ನ್ಯಾಯಾಧಿಕರಣ

ಬ್ಯಾಂಕ್ ಸಾಲ ವಸೂಲಾತಿಗೆಂದೇ ಪ್ರತ್ಯೇಕವಾದ ನ್ಯಾಯಾಧಿಕರಣ (tribunal) ಬೇಕೆನ್ನುವ ವಾದವಿದೆ. ಈ ವಾದವನ್ನು ಪುಷ್ಟಿಗೊಳಿಸುವಂಥ ಹಲವು ಅಂಶಗಳಿವೆ. ಬ್ಯಾಂಕ್ ದಾವೆಗಳ ಸಂಖ್ಯೆ ಅಗಾಧವಾಗಿ ಹೆಚ್ಚಿದೆ. ಈಗಿನ ವ್ಯವಸ್ಥೆಯಲ್ಲಿ ಈ ದಾವೆಗಳ ಇತ್ಯರ್ಥದಲ್ಲಿ ಅತಿ ವಿಳಂಬವಾಗುತ್ತಿದೆ. ಜತೆಗೆ ಬ್ಯಾಂಕ್ ದಾವೆಗಳು ವಿಶೇಷ ರೀತಿಯವಾಗಿರುವುದರಿಂದ ಪ್ರತ್ಯೇಕ ನ್ಯಾಯಾಧಿಕರಣದ ರಚನೆ ಸಮರ್ಥನೀಯ. ಇಂಥ ನ್ಯಾಯಾಧಿಕರಣದ ರಚನೆಯಾದರೆ ಬ್ಯಾಂಕ್ ದಾವೆಗಳ ಇತ್ಯರ್ಥ ಸುಗಮವಾಗಬಹುದು. ಡಿಕ್ರಿಗಳ ಜಾರಿಗೆ ವಿಶೇಷ ವಿಧಿವಿಧಾನಗಳನ್ನು ರೂಪಿಸಬಹುದು.

ಆದರೂ, ಬಹುಶಃ ಅಂಥ ನ್ಯಾಯಾಧಿಕರಣದ ರಚನೆ ಸದ್ಯದಲ್ಲಿ ಸಾಧ್ಯವಾಗಲಾರದು. ದಾವೆ ಹೂಡಿದ ಪ್ರಕರಣಗಳ ನಿರ್ವಹಣೆ ಹೇಗೆಂಬುದನ್ನು ಕುರಿತ ಚಿಂತನೆ ಈಗಿನ ಪರಿಸ್ಥಿತಿಯಲ್ಲಿ ಒಂದು ತುರ್ತು ಅಗತ್ಯ. ಇಲ್ಲಿ ಚರ್ಚೆಗೆ ತೆಗೆದುಕೊಂಡಿರುವ ಅಂಶಗಳತ್ತ ಬ್ಯಾಂಕ್ ಅಧಿಕಾರಿಗಳು ಗಮನ ಹರಿಸಿದರೆ ಪರಿಸ್ಥಿತಿ ಕೆಲಮಟ್ಟಿಗಾದರೂ ಉತ್ತಮಗೊಳ್ಳುವುದು ನಿಶ್ಚಿತ. ●

# ಅಂತರರಾಷ್ಟ್ರೀಯ ಬ್ಯಾಂಕಿಂಗಿನಲ್ಲಿ ನವಪ್ರವರ್ತನ*

## ಮೂಲ : ಬ್ಯಾಂಕ್ ಆಫ್ ಇಂಗ್ಲೆಂಡಿನ ಗವರ್ನರ್


**ಭಾಷಾಂತರಕಾರರು**

ಬಿ. ಎಸ್. ಚಂದ್ರಶೇಖರ್, ವ್ಯವಸ್ಥಾಪಕರು, ಭಾರತೀಯ ಸ್ಟೇಟ್ ಬ್ಯಾಂಕ್, ಕಡಗಂಚಿ ; ಎಲ್. ವಿ. ಮುರಳೀಧರ, ವ್ಯವಸ್ಥಾಪಕ, ಮೈಸೂರು ಬ್ಯಾಂಕ್, ಅಕ್ಕೂರು ಶಾಖೆ ; ಟಿ. ಕೆ. ರಂಗನಾಥ, ವ್ಯವಸ್ಥಾಪಕ, ಭಾರತೀಯ ಸ್ಟೇಟ್‌ಬ್ಯಾಂಕ್, ಚಿಕ್ಕಮಗಳೂರು ಶಾಖೆ ; ಹೇಮಚಂದ್ರ, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್, ರಾಯಚೂರು ಶಾಖೆ ; ಷಾ. ರಾಜಗೋಪಾಲ, ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ ; ಮೋ. ಕೃ. ಅನಂತಸ್ವಾಮಿ, ಅಧ್ಯಕ್ಷರು, ಸಮನ್ವಯ ಸಮಿತಿ ; ಪಾರ್ಶ್ವನಾಥಯ್ಯ, ಮೈಸೂರು ಬ್ಯಾಂಕ್, ಪ್ರಧಾನ ಕಛೇರಿ, ಬೆಂಗಳೂರು ; ನಾಗರತ್ನರಾಜಯ್ಯ, ಅಧಿಕಾರಿ, ಮೈಸೂರು ಬ್ಯಾಂಕ್, ಪ್ರಧಾನ ಕಛೇರಿ, ಬೆಂಗಳೂರು ; ಎಂ. ಎನ್. ಪ್ರಭಾಕರ್, ವ್ಯವಸ್ಥಾಪಕರು, ಭಾರತೀಯ ಸ್ಟೇಟ್ ಬ್ಯಾಂಕ್, ಬುಕ್ಕಾಪಟ್ಟಣ ; ತ್ಯಾ. ನ. ನಾಗಾನಂದ, ಭಾರತೀಯ ಸ್ಟೇಟ್ ಬ್ಯಾಂಕ್, ಜೆ. ಪಿ. ನಗರ ಶಾಖೆ ; ಹೆಚ್. ಸಿ. ವಿಶ್ವನಾಥ, ವ್ಯವಸ್ಥಾಪಕರು, ಭಾರತೀಯ ಸ್ಟೇಟ್ ಬ್ಯಾಂಕ್, ಮುನಿರಾಬಾದ್ ಶಾಖೆ ; ಜಿ. ಜಿ. ವಿಷ್ಣುಮೂರ್ತಿ, ಬೋಧಕರು, ಸಿಬ್ಬಂದಿ ತರಬೇತಿ ಕೇಂದ್ರ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ; ರವೀಂದ್ರಕಾಂತ, ಭಾರತೀಯ ಸ್ಟೇಟ್ ಬ್ಯಾಂಕ್, ವಿದೇಶಿ ವ್ಯವಹಾರ ಶಾಖೆ, ಬೆಂಗಳೂರು;ಎಂ. ಎಸ್. ಬಾಬು, ಚಿತ್ರದುರ್ಗ ಗ್ರಾಮೀಣ ಬ್ಯಾಂಕ್, ಪ್ರಧಾನ ಕಛೇರಿ, ಚಿತ್ರದುರ್ಗ ; ಜಿ. ಎಸ್. ರವೀಂದ್ರ, ಭಾರತೀಯ ಸ್ಟೇಟ್ ಬ್ಯಾಂಕ್, ವಿದೇಶಿ ವ್ಯವಹಾರ ಶಾಖೆ, ಬೆಂಗಳೂರು ; ಬಿ. ಬಲರಾಮ, ಭಾರತೀಯ ಸ್ಟೇಟ್ ಬ್ಯಾಂಕ್, ಅಣುಶಕ್ತಿ ಇಲಾಖಾ ಶಾಖೆ, ಬೆಂಗಳೂರು; ಎನ್. ಕೆ. ಕರೀಗೌಡ, ಭಾರತೀಯ ಸ್ಟೇಟ್‌ಬ್ಯಾಂಕ್, ಜಾಲಹಳ್ಳಿ ಶಾಖೆ ; ಜಯಣ್ಣ, ವ್ಯವಸ್ಥಾಪಕರು, ಸಣ್ಣ ಕೈಗಾರಿಕೆ ವಿಭಾಗ, ಮೈಸೂರು ಬ್ಯಾಂಕ್, ಮಲ್ಲೇಶ್ವರಂ ಶಾಖೆ ; ಎಂ. ಎನ್. ಕೃಷ್ಣಮೂರ್ತಿ, ಅಗ್ರ ಬ್ಯಾಂಕ್ ಅಧಿಕಾರಿ, ಅಗ್ರ ಬ್ಯಾಂಕ್ ಕಛೇರಿ, ಮೈಸೂರು ಬ್ಯಾಂಕ್, ತುಮಕೂರು.


ಹಣಕಾಸು ಮಾರುಕಟ್ಟೆಗಳಲ್ಲಿನ ನವಪ್ರವರ್ತನೆಯ ಕಾರಣಗಳು ಮತ್ತು ಅದರ ಪರಿಣಾಮಗಳನ್ನು ಕುರಿತು ಚರ್ಚಿಸುತ್ತಾ, ಗವರ್ನರ್ ಅವರು ಈ ಮುಂದಿನ ಅಂಶಗಳನ್ನು ಪ್ರತಿಪಾದಿಸುತ್ತಾರೆ.

* ಬಳಕೆದಾರರಿಗೆ ಕಡಿಮೆ ವೆಚ್ಚ ಮತ್ತು ಹೆಚ್ಚಿನ ನಮ್ಯತೆಯನ್ನು ದೊರಕಿಸಿಕೊಡುವ ಹೊಸ ಹಣಕಾಸು ಸಂಲೇಖಗಳನ್ನು ಜಾರಿಗೆ ತರಲಾಗಿದೆ.
* ಇವುಗಳಲ್ಲಿ ಅನೇಕ ಸಂಲೇಖಗಳು ಅವುಗಳನ್ನು ರೂಪಿಸಿದಾಗ ಜಾರಿಯಲ್ಲಿದ್ದ ಉಸ್ತುವಾರಿ ನಿಯಮಗಳ ವ್ಯಾಪ್ತಿಗೆ ಒಳಪಟ್ಟಿರಲಿಲ್ಲವಾದರೂ ಅವಕ್ಕಿಂತ ಹೆಚ್ಚು ರೂಢಿಗತವಾಗಿದ್ದ ಸಂಲೇಖಗಳು ಎದುರಿಸುತ್ತಿದ್ದ ಬಗೆಯ ಅಪಾಯಸಂಭವಗಳಿಗೇ ಇವು ಕೂಡ ಎಡೆಗೊಡುತ್ತವೆ. ಬ್ಯಾಂಕುಗಳು ಮತ್ತು ಉಸ್ತುವಾರಿದಾರರು ಈ ಅಪಾಯ ಸಂಭವಗಳನ್ನು ಗುರುತಿಸಲು ಸಮರ್ಥರಾಗಿರಬೇಕು.
* ಹೊಸ ಬೆಳವಣಿಗೆಗಳಲ್ಲಿ ಹಲವು ಅಂತರರಾಷ್ಟ್ರೀಯ ವ್ಯಾಪ್ತಿಯನ್ನು ಹೊಂದಿವೆ ಮತ್ತು ಬ್ಯಾಂಕುಗಳ ಹಾಗೂ ಇತರ ಹಣಕಾಸು ಸಂಸ್ಥೆಗಳ ನಡುವಣ ಸಾಂಪ್ರದಾಯಿಕ ಅಡ್ಡಗೆರೆಯನ್ನು ಮೀರುತ್ತವೆ.
* ನಾನಾ ಬಗೆಗಳು ಮತ್ತು ರಾಷ್ಟ್ರಿಕತೆಗಳುಳ್ಳ ಸಂಸ್ಥೆಗಳ ನಡುವೆ ಸಮಂಜಸವಾದ ಸ್ಪರ್ಧಾತ್ಮಕ ಸಮತೆಯನ್ನು ಖಾತರಿಪಡಿಸಿಕೊಳ್ಳಲು ಬ್ಯಾಂಕಿಂಗ್ ಮತ್ತು ಪ್ರತಿಭೂತಿ ಉಸ್ತುವಾರಿದಾರರು ಅಂತರರಾಷ್ಟ್ರೀಯವಾಗಿ ಸಹಕರಿಸಬೇಕಾಗುವುದು.
* ಒಂದೊಂದು ಸಂಸ್ಥೆಯೂ ಚಟುವಟಿಕೆಯ ಹೊಸ ಕ್ಷೇತ್ರಗಳನ್ನು ಪ್ರವೇಶಿಸುತ್ತಿದ್ದಂತೆ ಅವುಗಳ ಬಗ್ಗೆ ದೊರೆಯುವ ಮಾಹಿತಿಯ ಗುಣಮಟ್ಟ ಕಡಿಮೆ ವ್ಯಾಪ್ತಿಯದಾಗುತ್ತದೆ ಮತ್ತು ಪ್ರಜ್ಞಾಪೂರ್ಣವಾದ ಮಾರುಕಟ್ಟೆ ತೀರ್ಮಾನಗಳನ್ನು ಬೆಂಬಲಿಸಲು ಸಾಕಷ್ಟು ಮಾಹಿತಿ ಇರಬೇಕೆಂಬುದು ಮುಖ್ಯ.
* ಅನೇಕ ಹೊಸ ತಂತ್ರಗಳ ಸಂಕೀರ್ಣತೆಯಿಂದಾಗಿ ಅಪಾಯವನ್ನು ಅಳೆಯುವುದು ಹೆಚ್ಚು ಕ್ಲಿಷ್ಟವಾಗುತ್ತದೆ. ಆದ್ದರಿಂದ ಅಪಾಯಗಳನ್ನು ತಕ್ಕ ಮಟ್ಟಿಗೆ ನಿರ್ಧರಿಸಲಾಗಿದೆಯೆಂದೂ ನಿಯಂತ್ರಿಸಲಾಗಿದೆಯೆಂದೂ ತಕ್ಕ ಬೆಲೆ ಕಟ್ಟಲಾಗಿದೆಯೆಂದೂ ಖಾತರಿಪಡಿಸಿಕೊಳ್ಳುವುದು ಇನ್ನಷ್ಟು ಮುಖ್ಯವಾಗುತ್ತದೆ.
* ಮಾರಾಟಯೋಗ್ಯ ಆಸ್ತಿಗಳತ್ತ ಆಗಿರುವ ಬದಲಾವಣೆಯಿಂದಾಗಿ ಬ್ಯಾಂಕುಗಳ ಆಸ್ತಿ, ಪೋರ್ಟ್‌ಫೋಲಿಯೋಗಳ (ವಿನಿಯೋಜನ ವಿನ್ಯಾಸಗಳ) ಗುಣಮಟ್ಟದ ಮೇಲೆ ಮತ್ತು ಬಹುಶಃ ದೀರ್ಘಾವಧಿ ಉದರಿ ನಿರ್ಧಾರಗಳ ಗುಣಮಟ್ಟಗಳ ಮೇಲೆ ಕೂಡ ಪರಿಣಾಮಗಳಾಗುತ್ತವೆ. ಇದನ್ನು ಗುರುತಿಸುವ ಅಗತ್ಯ ಇದೆ.

ಸಮ್ಮೇಳನದ ಕಾರ್ಯಕ್ರಮದಲ್ಲಿ ಬಹುತೇಕ ಇತರ ಭಾಷಣಕಾರರು ಯಾವುದರ ಬಗ್ಗೆ ಮಾತನಾಡುತ್ತಾರೆ ಎಂಬುದು ಖಚಿತವಾಗಿದ್ದಾಗ್ಯೂ ನಾನು ಯಾವ ವಿಷಯದ ಬಗ್ಗೆ ಮಾತನಾಡಬೇಕೆಂದು ಸೂಚಿಸದಿರುವುದು ಆಹ್ಲಾದಕರ ಹಾಗೂ ಕಾಫಿ ಬಿಡುವಿನಷ್ಟೇ ಆಕರ್ಷಕ. ಇದನ್ನು ನೀವು ಗಮನಿಸಿರುತ್ತೀರಿ. ವಿಷಯದ ಆಯ್ಕೆಯ ಸಾಮರ್ಥ್ಯ ಕೆಲವೊಮ್ಮೆ ಮಿಶ್ರಫಲ ಉಳ್ಳದ್ದು. ಎಂದರೆ ಕೆಲವು ಸಲ ಆಯ್ಕೆಯಿಂದಲೇ ಕಟ್ಟರೆ ಹಲವೊಮ್ಮೆ ತನ್ನ ಮನಸ್ಸಿನಲ್ಲಿ ಮೊದಲೇ ನೆಲೆಗೊಂಡಿರುವ ವಿಚಾರಗಳಿಂದಾಗಿ ಅತಿ ಸಾಂಪ್ರದಾಯಿಕವಾದ

---

* ಬ್ಯಾಂಕ್ ಆಫ್ ಇಂಗ್ಲೆಂಡಿನ ಗವರ್ನರರು ಲಂಡನ್ನಿನಲ್ಲಿ ಸೇರಿದ್ದ ಅಂತರರಾಷ್ಟ್ರೀಯ ಬಂಡವಾಳ ಮಾರುಕಟ್ಟೆಗಳ ಸಮ್ಮೇಳನದಲ್ಲಿ 1986ರ ಮೇ 7ರಂದು ಮಾಡಿದ ಭಾಷಣ : **Innovation in International Banking**

ಸಾಮಾನ್ಯ ಮಾತುಗಳಲ್ಲಿ ತೊಡಗುತ್ತಾನೆ. ಆದರೆ ಇತರ ಕಾರ್ಯಕ್ರಮಗಳತ್ತ ಒಮ್ಮೆ ಕಣ್ಣುಹಾಯಿಸಿದಾಗ ಆಕಸ್ಮಿಕವಾಗಿಯೋ ಪೂರ್ವ ಯೋಜಿತವಾಗಿಯೋ ಈ ಸಮ್ಮೇಳನದಲ್ಲಿ ನಾನು ಮಾತನಾಡಲೇಬೇಕಾದ ಒಂದು ಅತಿ ಪ್ರಮುಖ ವಿಷಯ ಇದೆ ಎಂಬುದರ ಬಗ್ಗೆ ನನ್ನಲ್ಲಿ ಅನುಮಾನ ಉಳಿಯುವುದೇ ಇಲ್ಲ. ಅದೆಂದರೆ ಇಂದಿನ ವಿತ್ತೀಯ ದೃಶ್ಯವನ್ನು ವ್ಯಾಪಿಸಿರುವ ಪ್ರಚಂಡ ವೇಗದ ನವೋನ್ಮೇಷ ಪ್ರಕ್ರಿಯೆಯ ಕಾರಣಗಳು ಹಾಗೂ ಪರಿಣಾಮಗಳು.

"ಎಂದಿಗೂ ಮೊದಲಿಗರಾಗದಿರಿ." ಇದು ಬ್ಯಾಂಕರುಗಳಿಗೆ ಸಾಮಾನ್ಯವಾಗಿ ನೀಡಲಾಗುತ್ತಿದ್ದ ಸಲಹೆ. ಒಳ್ಳೆಯದೋ, ಕೆಟ್ಟದ್ದೋ, ಈಚೆಗೆ ಇದು ಅಷ್ಟಾಗಿ ಕೇಳಿಬರುತ್ತಿಲ್ಲ. ಬದಲಾಗಿ ಬ್ಯಾಂಕುಗಳು ಹಾಗೂ ಇತರ ಹಣಕಾಸು ಸಂಸ್ಥೆಗಳು ಹೊಸ ಮಾರುಕಟ್ಟೆಗಳನ್ನು ಪ್ರವೇಶಿಸಲು ಮತ್ತು ಹೊಸ ಸಂಲೇಖಗಳನ್ನುನೀಡಲು ಪರಸ್ಪರ ಸ್ಪರ್ಧಿಸುತ್ತಿವೆ. ಈ ಸಂಲೇಖಗಳು ಹೆಚ್ಚಿನ ನಮ್ಯತೆ ಹಾಗೂ ಕಡಿಮೆ ವೆಚ್ಚಗಳಿಂದಾಗಿ ಹಣಕಾಸು ಮಾರುಕಟ್ಟೆಗಳ ಅನೇಕ ಬಳಕೆದಾರರಿಗೆ ಸಾಕಷ್ಟು ಪ್ರಯೋಜನಗಳನ್ನು ನೀಡುತ್ತವೆ. ಇದನ್ನು ಸ್ವಾಗತಿಸಬೇಕು. ಏಕೆಂದರೆ ಹಣಕಾಸು ವಲಯ ಅಸ್ತಿತ್ವದಲ್ಲಿರುವುದು ತನ್ನ ಸಲುವಾಗಿ ಮಾತ್ರವಲ್ಲ. ಅರ್ಥವ್ಯವಸ್ಥೆಯ ಇತರ ವಲಯಗಳಿಗೆ ಸೇವೆ ಒದಗಿಸುವ ಸಲುವಾಗಿ ಹೊಸ ಹಣಕಾಸು ತಂತ್ರಗಳ ಪ್ರಯೋಜನ ಪಡೆಯುವುದರಲ್ಲಿ ಹೆಚ್ಚಿನ ಚುರುಕುತನ ತೋರಿ ವಿಶೇಷವಾಗಿ ಯಶಸ್ಸುಗಳಿಸಿದೆ ಎಂದು ಗುರುತಿಸಲಾದ ಬ್ರಿಟಿಷ್ ಕಂಪನಿಯೊಂದನ್ನು ಇಂದಿನ ಸಮಾರಂಭದ ಅಧ್ಯಕ್ಷ ಅಲಾನ್ ಕ್ಲೆಮೆಂಟ್ಸ್ ಪ್ರತಿನಿಧಿಸುತ್ತಾರೆ.

ಆದರೆ ಅಂತರರಾಷ್ಟ್ರೀಯ ಬ್ಯಾಂಕಿಂಗ್ ಮತ್ತು ಬಂಡವಾಳ ಮಾರುಕಟ್ಟೆಗಳಲ್ಲಿನ ಬದಲಾವಣೆ ಮತ್ತು ನವಪ್ರವರ್ತನ ಪ್ರಕ್ರಿಯೆ ಅನೇಕ ಸಮಸ್ಯೆಗಳಿಗೆ ಎಡೆಮಾಡಿಕೊಡಬಹುದು. ಇವು ತೀವ್ರವಾಗಿ ಚರ್ಚಿಸಲ್ಪಡುತ್ತಿವೆ. ಇದು ನ್ಯಾಯವೆ ? ಹೊಸ ತಂತ್ರಗಳನ್ನು ಅಳವಡಿಸಿಕೊಂಡಂತೆಲ್ಲ ನಷ್ಟಸಂಭಾವ್ಯತೆಯ ಸ್ವರೂಪ ಬದಲಾಗುವುದರಿಂದ ಅದನ್ನು ನಿರ್ವಹಿಸುವುದು ಮತ್ತು ಅದರ ಉಸ್ತುವಾರಿ ಮಾಡುವುದು ಹೇಗೆ ? ಕೇವಲ ಬೇರೆಬೇರೆ ರಾಷ್ಟ್ರೀಯತೆಗಳ ನಡುವೆ ಮಾತ್ರವಲ್ಲದೆ ವಿವಿಧ ರೀತಿಯ ಸಂಸ್ಥೆಗಳ ನಡುವೆಯೂ ಸ್ಪರ್ಧಾತ್ಮಕ ಕ್ಷಮತೆಯ ಇಚ್ಛೆಯನ್ನು ಪೂರೈಸುವುದು ಹೇಗೆ ? ಮಾರುಕಟ್ಟೆಗಳು ತ್ವರಿತವಾಗಿ ಬದಲಾಗುತ್ತಿರುವಾಗ ಸಾಕಷ್ಟು ಮಾಹಿತಿ ಒದಗಿಸಲಾಗಿದೆಯೆಂಬುದನ್ನು ನಾವು ಖಚಿತಪಡಿಸಿಕೊಳ್ಳುವುದು ಹೇಗೆ ? ಇವು ಈ ಬೆಳಗ್ಗೆ ನಾನು ಹೇಳಲು ಉದ್ದೇಶಿಸಿರುವ ವಿಷಯಗಳಾಗಿವೆ.

## ಹಿನ್ನೆಲೆ

ಯಶಸ್ವಿ ನವಪ್ರವರ್ತನಕ್ಕೆ ಅಗತ್ಯ ಮತ್ತು ಅವಕಾಶಗಳೆರಡೂ ಸಾಧಾರಣವಾಗಿ ಆವಶ್ಯಕ. ಸಂವಹನಗಳ ಮತ್ತು ಗಣಿಸುವ ಸಾಮರ್ಥ್ಯದ ವೆಚ್ಚವನ್ನು ವಿಶೇಷವಾಗಿ ಇಳಿಸಿರುವ ಇತ್ತೀಚಿನ ವರ್ಷಗಳ ತಂತ್ರಜ್ಞಾನಾತ್ಮಕ ಬೆಳವಣಿಗೆಗಳು ಅವಕಾಶಗಳನ್ನು ಭಾಗಶಃ ಒದಗಿಸಿವೆ. ಮಾರುಕಟ್ಟೆಗಳ ಅನಿಯಂತ್ರಣ ಮತ್ತು ಉದಾರೀಕರಣದತ್ತ ಹಲವು ದೇಶಗಳಲ್ಲಿನ ಸಾರ್ವತ್ರಿಕ ಯತ್ನವೂ ಅವಕಾಶಗಳನ್ನು ಒದಗಿಸಿವೆ. ಎಲ್ಲ ಹೊಸ ಸಂಲೇಖಗಳೂ ಸಂಕೀರ್ಣವಾಗಿರಬೇಕಾಗಿಲ್ಲ ಅಥವಾ ಅವುಗಳಿಗೆ ಪ್ರಮುಖ ತಂತ್ರಜ್ಞಾನಾತ್ಮಕ ನಿವೇಶ ಅಗತ್ಯವೂ ಅಲ್ಲ. ಕೇವಲ ನಿಯಂತ್ರಣಾತ್ಮಕ ಅಥವಾ ಇತರೆ ನಿರ್ಬಂಧಗಳನ್ನು ತೆಗೆದುಹಾಕುವುದರ ಮೂಲಕ ತುಂಬಾ ಸರಳವಾದ ಕೆಲವು ಸಂಲೇಖಗಳನ್ನು ಸೃಷ್ಟಿಸಲು ಸಾಧ್ಯ.

ನವಪ್ರವರ್ತನೆಯ ಅಗತ್ಯ ಭಾಗಶಃ ಹಣಕಾಸು ಸಂಸ್ಥೆಗಳ ನಡುವಣ ಸ್ಪರ್ಧೆಯಿಂದ ಉದ್ಭವಿಸಿದೆ. ಅಂತರರಾಷ್ಟ್ರೀಯ ಬ್ಯಾಂಕಿಂಗ್ ಒಂದು ತೀವ್ರ ಸ್ಪರ್ಧಾತ್ಮಕ ವ್ಯವಹಾರ—ಎಂದರೆ ಅನೇಕಾನೇಕ ಭಾಗಿಗಳು ಒಂದೇ ಬಗೆಯ ಉತ್ಪನ್ನಗಳನ್ನು ನೀಡುವುದು—ಎಂಬುದನ್ನು ನಾನು ಹೇಳಬೇಕಾದ್ದಿಲ್ಲ. ಗ್ರಾಹಕರ—ಎಂದರೆ ಸಾಲಗಾರರ ಮತ್ತು ವಿನಿಯೋಜಕರ—ಚೌಕಾಸಿ ಸಾಮರ್ಥ್ಯ ಹೆಚ್ಚಾಗಿರುವ ಪ್ರವೃತ್ತಿ ಇರುತ್ತದೆ. ನಾನಾ ಬಗೆಯ ಸಾಲಗಾರರಿಗೆ ಮತ್ತು ವಿನಿಯೋಜಕರಿಗೆ ನೀಡಲಾಗುತ್ತಿರುವ ಷರತ್ತುಗಳ ಬಗ್ಗೆ ವ್ಯಾಪಕವಾಗಿ ಲಭ್ಯವಿರುವ ವಿವರವಾದ ಮಾಹಿತಿಯಿಂದ ಕೂಡಿ ಮಾರುಕಟ್ಟೆಯು ಬಹಿರಂಗದ್ದಾಗಿದೆ. ಆದುದರಿಂದ ಸ್ಪರ್ಧಾತ್ಮಕ ಪ್ರಯೋಜನವನ್ನು ಪಡೆಯುವ ಸಾಧನವಾಗಿ ನವಪ್ರವರ್ತನೆಯನ್ನು ಬಳಸಲಾಗುತ್ತಿದೆ.

ನವೀನ ತಂತ್ರಗಳಲ್ಲಿನ ಚಟುವಟಿಕೆ ವಿವಿಧ ಬಗೆಯ ಸಂಸ್ಥೆಗಳಿಗೆ ವ್ಯಾಪಕವಾಗಿ ಹಬ್ಬಿದೆ. ಬಹಳಷ್ಟು ಚಟುವಟಿಕೆ ಬ್ರಿಟನ್ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿ ನಡೆಯುವುದಾದರೂ ಕೇವಲ ಬ್ರಿಟಿಷ್ ಹಾಗೂ ಅಮೆರಿಕನ್ ಬ್ಯಾಂಕುಗಳು ಇದರಲ್ಲಿ ತೊಡಗಿವೆ ಎಂದರ್ಥವಲ್ಲ. ಎಲ್ಲ ಪ್ರಮುಖ ಹಣಕಾಸು ಕೇಂದ್ರಗಳ ಸಂಸ್ಥೆಗಳು ಭಾಗವಹಿಸುವುದನ್ನು ನಾವು ಲಂಡನ್ನಿನಲ್ಲಿ ಕಾಣಬಹುದು. ಮಾರುಕಟ್ಟೆ ವಲಯಗಳ ನಡುವಣ ಅನೇಕ ಸಾಂಪ್ರದಾಯಿಕ ಸೀಮಾರೇಖೆಗಳನ್ನು ತೊಡೆದುಹಾಕಲು ನವಪ್ರವರ್ತನಗಳು ಸಹಾಯಕವಾಗಿವೆ ಮತ್ತು ಈಗ ಪ್ರತಿಭೂತಿ ಗೃಹಗಳು ಮತ್ತು ಬ್ಯಾಂಕುಗಳು ಒಂದೇ ಬಗೆಯ ಉತ್ಪನ್ನಗಳೊಂದಿಗೆ ಮುಖಾಮುಖಿಯಾಗಿ ಸ್ಪರ್ಧಿಸುತ್ತಿವೆ. ಬ್ಯಾಂಕಿಂಗ್ ಮತ್ತು ಪ್ರತಿಭೂತಿ ವ್ಯವಹಾರಗಳ ನಡುವಣ ಕಾನೂನಿಕ ಪ್ರತ್ಯೇಕತೆಯನ್ನು ರಕ್ಷಿಸಿಕೊಳ್ಳುವ ಸಂಯುಕ್ತ ಸಂಸ್ಥಾನ ಮತ್ತು ಜಪಾನ್‌ನಂತಹ ದೇಶಗಳ ಸಂಸ್ಥೆಗಳು ಲಂಡನ್ನಿನಲ್ಲಿ ಅದೇ ಪ್ರಮಾಣದ ನಿರ್ಬಂಧಗಳಿಗೆ ಒಳಪಟ್ಟಿಲ್ಲ. ಅಲ್ಲಿ ಕೂಡ, ಇತರ ಐರೋಪ್ಯ ಹಣಕಾಸು ಕೇಂದ್ರಗಳಲ್ಲಿ ಇರುವಂತೆ, ಅಂತಹ ಪ್ರತ್ಯೇಕತೆ ಇರುವುದಿಲ್ಲ.

ನವಪ್ರವರ್ತನ ತಳೆದಿರುವ ಸ್ವರೂಪ ಆರ್ಥಿಕಾಭಿವೃದ್ಧಿಗಳಿಂದ ಭಾಗಶಃ ನಿರ್ಧರಿಸಲ್ಪಟ್ಟಿದೆ.1970ರ ದಶಕದ ಹಣದುಬ್ಬರ ಒತ್ತಡಗಳು ಬಹುತೇಕ ರಾಷ್ಟ್ರಗಳಲ್ಲಿ ಚಂಚಲವಾದ ಬಡ್ಡಿ ಮತ್ತು ವಿನಿಮಯ ದರಗಳ ಪರಂಪರೆಯೊಂದನ್ನು ಬಿಟ್ಟುಹೋದವು. ಇದರ ಒಂದು ಫಲವೆಂದರೆ ನಷ್ಟನಿರೋಧಕ ಸಂಲೇಖಗಳಿಗೆ ಹೆಚ್ಚಿನ ಬೇಡಿಕೆ. ಇವು ಒಂದಕ್ಕಿಂತ ಹೆಚ್ಚು ರೂಪಗಳಲ್ಲಿ ಇರಬಹುದು. ಉದಾಹರಣೆಗೆ ಲಂಡನ್ನಿನಲ್ಲಿ ಲಿಫೀ (LEFEE) ಮತ್ತು ಶೇರು ವಿನಿಮಯ ಕೇಂದ್ರದಲ್ಲಿ ವ್ಯಾಪಾರವಾಗುವ ಕರೆನ್ಸಿ ಆಯ್ಕೆಗಳ ಜೊತೆಗೆ ಮುಂಗಟ್ಟೆ ಮೇಲೆ ನಡೆಯುವ ಮಾರುಕಟ್ಟೆಯಲ್ಲೂ ಇಂತಹ ವಹಿವಾಟುಗಳು ಕ್ರಿಯಾಶೀಲವಾಗಿದ್ದುವು. ಮತ್ತೆ ಯೂರೋ ಬಾಂಡ್ ಮಾರುಕಟ್ಟೆಯು ಇದೇ ಲಕ್ಷಣಗಳುಳ್ಳ ಸಂಲೇಖಗಳನ್ನುಬಾಂಡ್ ವಾರಂಟ್‌ಗಳ ರೂಪದಲ್ಲಿ ನೀಡುತ್ತದೆ. ಬ್ಯಾಂಕಿಂಗ್ ಮತ್ತು ಬ್ಯಾಂಕಿಂಗೇತರ ಮಾರುಕಟ್ಟೆಗಳಲ್ಲಿ ಒಂದೇ ಬಗೆಯ ಸಂಲೇಖಗಳು ನಾನಾ ಸ್ವರೂಪಗಳಲ್ಲಿ ಲಭ್ಯವಿರುವುದರಿಂದಾಗಿ ಹಣಕಾಸು ವ್ಯವಸ್ಥೆಯಲ್ಲಿ ಬ್ಯಾಂಕುಗಳು ಪಡೆದಿದ್ದ ವಿಶೇಷ ಸ್ಥಾನಕ್ಕೆ ಕುಂದುಂಟಾಗುವ ಪ್ರವೃತ್ತಿ ಉಂಟಾಗಿದೆ.

ಕೆಲವು ಬ್ಯಾಂಕುಗಳ ಉದರಿ ಅರ್ಹತೆಯ ಬಗ್ಗೆ ಇರುವ ಅಂಜಿಕೆ ಈ ಪ್ರವೃತ್ತಿಗೆ ಪುಷ್ಟಿ ನೀಡುತ್ತದೆ. ಅತಿಯಾದ ಋಣಭಾರಕ್ಕೆ ಒಳಗಾದ ಅಭಿವೃದ್ಧಿಶೀಲ ದೇಶಗಳಿಗೆ ಒಡ್ಡಿಕೊಳ್ಳಲು ಠೇವಣಿದಾರರು ಹೊಂದಿರುವ ಆತಂಕದಲ್ಲಿ ಇದು ವ್ಯಕ್ತವಾಗುತ್ತದೆ. ಬ್ಯಾಂಕುಗಳು ತಮ್ಮ ಬಂಡವಾಳವನ್ನು ಹೆಚ್ಚಿಸಿಕೊಳ್ಳಬೇಕೆಂದು ಬ್ಯಾಂಕ್ ಮೇಲ್ವಿಚಾರಕರು ಆಗ್ರಹಪಡಿಸಿದ್ದಾರೆ. ಇದರಿಂದಾಗಿ ತಮ್ಮ ಸ್ಥಿತಿ ವಿವರಣ ಪಟ್ಟಿಯಲ್ಲಿ ಹೊಣೆಗಳು ಬೆಳೆಯುವುದನ್ನು ಮಿತಿಗೊಳಿಸಿ ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳುವ ಮಾರ್ಗದತ್ತ ಗಮನ ಹರಿಸುವಂತಾಗಿದೆ.

ಹಣಕಾಸು ನವಪ್ರವರ್ತನೆಯ ಪ್ರಕ್ರಿಯೆಯ ಇಂತಹ ಮುಖ್ಯ ಅಂಶವೊಂದು ನಮ್ಮ ಪೂರ್ವಜರಿಗೆ ಸ್ಥೂಲವಾಗಿಯಾದರೂ ಪರಿಚಿತವಾಗಿದ್ದಿರಬಹುದಾದ ಸಂಲೇಖಗಳ ಪುನರಾವಿಷ್ಕಾರವೆಂದು ತೋರುವುದುಕೊಂಚ ವಿಪರ್ಯಾಸ ಎನಿಸಬಹುದು. ಆದಾಗ್ಯೂ ಮಾರಾಟಯೋಗ್ಯ ಪ್ರತಿಭೂತಿಗಳ ಬಳಕೆಯನ್ನು ಹೆಚ್ಚಿಸುವುದು ಬ್ಯಾಂಕ್ ಸ್ಥಿತಿವಿವರಣ ಪಟ್ಟಿಗಳ ಮೇಲಣ ಒತ್ತಡಗಳ ಒಂದು ಪರಿಣಾಮ ಎನ್ನುವುದು ನಿಜ ; ಇದರ ಸುಸ್ಪಷ್ಟ ಚಿಹ್ನೆ ಎಂದರೆ ಅಂತರರಾಷ್ಟ್ರೀಯ ಬಾಂಡ್ ಮಾರುಕಟ್ಟೆಗಳ ಬೆಳವಣಿಗೆ ಹಾಗೂ ವರ್ಗಾರ್ಹ ಸಾಲಗಳಂತಹ ಉಪಾಯಗಳು ಮತ್ತು ಆಧಾರಗಳಾಗಿ ಅಡಮಾನಗಳ ಪರಿವರ್ತನೆ ಇವುಗಳ ಮೂಲಕ ಸಾಲ ನೀಡಿಕೆಯನ್ನು ಹೆಚ್ಚು ದ್ರವ್ಯತ್ವಗುಣವುಳ್ಳದ್ದನ್ನಾಗಿ ಮಾಡುವ ಉದ್ದೇಶದ ಕ್ರಮಗಳು.

ಅಲ್ಪಾವಧಿ ಮಾರಾಟಯೋಗ್ಯ ಪತ್ರಗಳಲ್ಲಿ ಕೂಡ ಹೆಚ್ಚಿನ ಆಸಕ್ತಿ ಉಂಟಾಗಿದೆ. ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ ವಾಣಿಜ್ಯ ಪತ್ರ ನೀಡಿಕೆ

ಗಳು ಶೀಘ್ರವಾಗಿ ಬೆಳೆದಿವೆ. ಯೂರೋ ಮಾರುಕಟ್ಟೆಗಳು ತಮ್ಮದೇ ಆದ ಅಂತಹುದೇ ಪತ್ರವನ್ನು ರೂಪಿಸಿಕೊಂಡಿವೆ ; ಮತ್ತು ಇತರ ದೇಶಗಳು ಅಂತಹವೇ ಆದ ಮಾರುಕಟ್ಟೆಗಳನ್ನು ತೆರೆದಿವೆ. ನಾವು ಕೂಡ ಕಳೆದ ವಾರ ಸ್ಟರ್ಲಿಂಗ್ ವಾಣಿಜ್ಯ ಪತ್ರದ ರೂಪರೇಷೆಯನ್ನು ಪ್ರಕಟಿಸಿದೆವು. ಇಲ್ಲಿರುವ ಹಲವರಿಗೆ ತಿಳಿದಿರುವಂತೆ ಸ್ಟರ್ಲಿಂಗ್ ವಾಣಿಜ್ಯ ಪತ್ರದ ಪ್ರಮುಖ ನಿರ್ಬಂಧವೆಂದರೆ ಠೇವಣಿ ಸ್ವೀಕಾರ ಕುರಿತ ಬ್ಯಾಂಕಿಂಗ್ ಅಧಿನಿಯಮದ ಉಪಬಂಧಗಳನ್ನು ಈ ನೀಡಿಕೆಗಳು ಉಲ್ಲಂಘಿಸ ಬಹುದು ಎಂಬುದು. ಆದರೆ ಈ ಬಗೆಯ ನೀಡಿಕೆಗಳಲ್ಲಿ ಹಲವು ಪ್ರಮುಖ ಕಂಪನಿಗಳು ವ್ಯಕ್ತಪಡಿಸಿರುವ ಆಸಕ್ತಿಯ ದೃಷ್ಟಿಯಲ್ಲಿ ವಿನಿಯೋಜಕರಿಗೆ ಸಾಕಷ್ಟು ರಕ್ಷಣೆಯನ್ನು ಖಾತರಿಪಡಿಸಿಕೊಳ್ಳಲು ಕೆಲವೊಂದು ಷರತ್ತುಗಳನ್ನು ಪಾಲಿಸಿದ್ದಾದರೆ ಸ್ಟರ್ಲಿಂಗ್ ವಾಣಿಜ್ಯ ಪತ್ರದ ನೀಡಿಕೆಗಳನ್ನು ಬ್ಯಾಂಕಿಂಗ್ ಅಧಿನಿಯಮದಿಂದ ವಿನಾಯಿತಿಗೆ ಒಳಪಡಿಸಲು ಒಂದು ರೂಪರೇಷೆಯನ್ನು ಸ್ಥಾಪಿಸುವುದು ಸೂಕ್ತವೆಂದು ನಾವು ಭಾವಿಸಿದ್ದೇವೆ.

ಈ ಕ್ಷೇತ್ರದಲ್ಲಿ, ಎಂದರೆ ಬಂಡವಾಳ ಮತ್ತು ಹಣ ಮಾರುಕಟ್ಟೆಗಳ ಮುಖಾಮುಖಿಯಲ್ಲಿಯ ಅನುಭವದ ಬೆಳಕಿನಿಂದ ನಾವು ನಮ್ಮ ದಾರಿಯನ್ನು ಹುಡುಕಿಕೊಳ್ಳಬಯಸುತ್ತೇವೆ. ಇಂತಹ ನೀಡಿಕೆಗಳಿಗೆ ಸಂಬಂಧಿಸಿದಂತೆ ವಿವರಣ ಪತ್ರದ ನಿಬಂಧನೆಗಳ ಅಳವಡಿಕೆಯೂ ಸೇರಿದಂತೆ ಯಥಾಕಾಲದಲ್ಲಿ ಶಾಸನದ ಚೌಕಟ್ಟಿನೊಳಗೆ ಮತ್ತಷ್ಟು ಬದಲಾವಣೆಗಳು ಅವಶ್ಯವೆಂಬುದನ್ನು ನಾವು ಗುರುತಿಸುತ್ತೇವೆ. ಆದರೆ ಹಿಂದಿನ ವಾರದ ಪ್ರಕಟಣೆಗೆ ಉಪಯುಕ್ತವಾದ ಒಂದು ಮೊದಲ ಹೆಜ್ಜೆ ಇದು ಎಂದು ನಾವು ಆಶಿಸುತ್ತೇವೆ. ಈ ಮಧ್ಯಾಹ್ನ ಸ್ಟರ್ಲಿಂಗ್ ವಾಣಿಜ್ಯ ಪತ್ರಕ್ಕೆ ನೀವಾಗಿಯೇ ಒಂದು ಕಮ್ಮಟವನ್ನು ಮೀಸಲಾಗಿಟ್ಟಿರುವುದನ್ನು ನಾನು ಆಸಕ್ತಿಯಿಂದ ಗಮನಿಸಿದ್ದೇನೆ. ನಮ್ಮ ಪ್ರಕಟಣೆ ಹೊರಬಿದ್ದ ಇಷ್ಟು ಶೀಘ್ರದಲ್ಲಿಯೇ ನೀವು ಈ ವಿಷಯವನ್ನು ಆಯ್ದುಕೊಂಡಿರುವುದು ನಿಮ್ಮ ಸಂಘಟನಕಾರರು ಅತಿಶಯವಾದ ಸೂಕ್ಷ್ಮದೃಷ್ಟಿಯ ಸಾಮರ್ಥ್ಯವನ್ನು ಬೆಳೆಸಿಕೊಂಡಿದ್ದಾರೆ ಎಂಬುದನ್ನು ತೋರಿಸುತ್ತದೆ.

### ಮೇಲ್ವಿಚಾರಣೆ ಸಮಸ್ಯೆಗಳು

ಈಗ ವಿಕಾಸಗೊಂಡಿರುವ ಹೊಸ ಸಂಲೇಖಗಳ ವಿವಿಧತೆಯಿಂದ ಮೇಲ್ವಿಚಾರಕರಿಗೆ ಕ್ಲಿಷ್ಟ ಸಮಸ್ಯೆಗಳು ಉಂಟಾಗುತ್ತವೆ. ಬದಲಾಗುತ್ತಿರುವ ಪರಿಸರವನ್ನು ನಿಭಾಯಿಸುವಂತೆ ತಮ್ಮ ವ್ಯವಸ್ಥೆಗಳನ್ನು ಹೊಂದಿಸಲು ಅವರು ಯತ್ನಿಸಬೇಕು. ಆದರೆ ಅವರು ವಿವಿಧ ಸಂಸ್ಥೆಗಳಿಗೆ ಸಂಬಂಧಿಸಿದಂತೆ ತಕ್ಕಷ್ಟು ಸ್ಥಿರವಾದ ಕಾರ್ಯಕ್ಷೇತ್ರವೊಂದನ್ನು ಸಾಧ್ಯವಾದಷ್ಟು ಮಟ್ಟಿಗೆ ಕಾಪಾಡಿಕೊಳ್ಳಬೇಕು.

ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಹೊಸ ಸಂಲೇಖಗಳಲ್ಲಿ ಹಲವು, ಅವುಗಳನ್ನು ರೂಪಿಸಿದಾಗ ಜಾರಿಯಲ್ಲಿದ್ದ ಉಸ್ತುವಾರಿ ನಿಯಮಗಳ ವ್ಯಾಪ್ತಿಗೆ ಒಳಪಟ್ಟಿರಲಿಲ್ಲ. ಅವುಗಳ ಸೃಷ್ಟಿಗೆ ಇದು ಬಹುಶಃ ಮುಖ್ಯ ಕಾರಣವಾಗಿತ್ತು. ಆದರೆ ಅವು ಹೆಚ್ಚು ಸಾಂಪ್ರದಾಯಿಕ ಸಂಲೇಖಗಳಂತೆಯೇ, ಅದೇ ಬಗೆಗಳ ಉದರಿ ನಷ್ಟ ಸಂಭಾವ್ಯತೆಗಳಿಗೆ ಅಥವಾ ವಿದೇಶಿವಿನಿಮಯ ಒಡ್ಡುವಿಕೆಗೆ ಎಡೆಮಾಡಿಕೊಡುತ್ತದೆ. ಈ ನಷ್ಟ ಸಂಭಾವ್ಯತೆಗಳನ್ನು ಹಲವು ವೇಳೆ ಅಳೆಯುವುದು ತೊಡಕಿನದಾದರೂ, ಈ ನಷ್ಟ ಸಂಭಾವ್ಯತೆಯನ್ನು ಯಾರು ಹೊರುತ್ತಾರೆ ಎಂಬುದು ಯಾವಾಗಲೂ ಸ್ಪಷ್ಟವಾಗಿಲ್ಲವಾದರೂ ಹೀಗಾಗುತ್ತದೆ. ಈ ನಷ್ಟಸಂಭಾವ್ಯತೆಗಳನ್ನು ಗುರುತಿಸಲು ಬ್ಯಾಂಕುಗಳಿಗೂ ಅಂತೆಯೇ ಮೇಲ್ವಿಚಾರಕರಿಗೂ ಸಾಮರ್ಥ್ಯ ಇರಬೇಕು.

ನಾವು ಬ್ರಿಟನ್ನಿನಲ್ಲಿ ಮಾಡಲು ಪ್ರಯತ್ನಿಸಿದ್ದು ವಾಸ್ತವವಾಗಿ ಇದನ್ನೇ. ಬ್ಯಾಂಕಿಂಗ್ ಮಾರುಕಟ್ಟೆಗಳಲ್ಲಿಯ ಬದಲಾವಣೆಗಳಿಗೆ ಶೀಘ್ರವಾಗಿ ಮತ್ತು ನಮ್ಯವಾಗಿ ಅದು ಹೊಂದಿಕೊಳ್ಳಬಲ್ಲುದೆಂಬುದು ನಮ್ಮ ಸಾಂಪ್ರದಾಯಿಕ ಉಸ್ತುವಾರಿ ಅಭಿಗಮನದ ಸದ್ಗುಣಗಳಲ್ಲಿ ಒಂದು. ಉದಾಹರಣೆಗೆ, ಈಚಿನ ವರ್ಷಗಳಲ್ಲಿ ಚಲಾರ್ಥ ಆಯ್ಕೆಗಳನ್ನು, ನೋಟು ನೀಡಿಕೆ ಸೌಲಭ್ಯಗಳನ್ನು ನಮ್ಮ ಉಸ್ತುವಾರಿ ವ್ಯವಸ್ಥೆಯೊಳಗೆ ತಂದಿದ್ದೇವೆ.

ಏನೇ ಇರಲಿ, ನಾವು ಪ್ರಸ್ತಾಪಿಸುತ್ತಿರುವ ಬೆಳವಣಿಗೆಯ ಬಗೆಗಳು ಒಂದೇ ದೇಶಕ್ಕೆ ಸೀಮಿತವಲ್ಲ ಅಥವಾ ಒಂದೆರಡು ದೇಶಗಳಿಗೂ ಸೀಮಿತವಲ್ಲ. ಈ ಕಾರಣಕ್ಕಾಗಿ ಮತ್ತು ನಾನು ಹಿಂದೆ ಪ್ರಸ್ತಾಪಿಸಿದ ಸ್ಥಿರ ಕಾರ್ಯಕ್ಷೇತ್ರವನ್ನು ಉಳಿಸಿಕೊಳ್ಳಲು ಅಂತರರಾಷ್ಟ್ರೀಯ ಅಭಿಗಮನವೊಂದನ್ನು ಸ್ವೀಕರಿಸಬೇಕು. ಈ ಉದ್ದೇಶದ ಸಾಧನೆಯಲ್ಲಿ ಈ ವರ್ಷದ ಮಾರ್ಚಿನಲ್ಲಿ ಬಾಸೆಲ್ ಮೇಲ್ವಿಚಾರಕರ ಸಮಿತಿಯು ಬ್ಯಾಂಕುಗಳ ಸ್ಥಿತಿವಿವರಣ ಪಟ್ಟಿಯಾಚೆಗಿನ ಹೊಣೆಗಳನ್ನು ಕುರಿತು ಪ್ರಬಂಧವೊಂದನ್ನು ಪ್ರಕಟಿಸಿತು. ಹೊಸ ಬ್ಯಾಂಕಿಂಗ್ ತಂತ್ರಗಳು ವಿಕಾಸಗೊಂಡಂತೆ ಅವಕ್ಕೆ ವ್ಯಾಪಕವಾಗಿ ಸಂಯೋಜಿಸಿದ ಮೇಲ್ವಿಚಾರಣ ಪ್ರತಿವರ್ತನೆಯನ್ನು ಪ್ರೋತ್ಸಾಹಿಸುವುದು ಅದರ ಗುರಿಗಳಲ್ಲಿ ಒಂದಾಗಿತ್ತು. ಅಸ್ತಿತ್ವದಲ್ಲಿರುವ ಅಭಿಗಮನಗಳ ಒಗ್ಗೂಡುವಿಕೆಗಾಗಿ ಕೆಲಸ ಮಾಡುವುದಕ್ಕಿಂತ ಆರಂಭದಿಂದಲೇ ಸುಸಂಗತ ಅಭಿಗಮನವೊಂದನ್ನು ಸ್ವೀಕರಿಸಲು ಮೇಲ್ವಿಚಾರಣಾ ಅಧಿಕಾರಗಳಿಗೆ ಈಗ ಒಂದು ಅವಕಾಶ ಇದೆ. ಮೇಲ್ವಿಚಾರಣಾ ನೀತಿಗಳನ್ನು ವಿಕಾಸಗೊಳಿಸುವ ನಿಶ್ಚಿತ ಮಾರ್ಗವು ದೇಶಗಳ ನಡುವೆ ಅನಿವಾರ್ಯವಾಗಿ ಬದಲಾಗುವುದಾದರೂ ಈ ಪ್ರಬಂಧವು ಕನಿಷ್ಠ ಪಕ್ಷ ಸಾಮಾನ್ಯ ಚೌಕಟ್ಟೊಂದನ್ನು ಒದಗಿಸುತ್ತದೆ.

ಸ್ಥಿತಿ ವಿವರಣ ಪಟ್ಟಿಗಳ ಆಚೆಗಿನ ಸಂಲೇಖಗಳ ವ್ಯಾಪಕ ಶ್ರೇಣಿಯಲ್ಲಿ ನಿಹಿತವಾದ ಉದರಿ ನಷ್ಟಸಂಭಾವ್ಯತೆಗಳನ್ನು ನಿರ್ವಹಿಸುವ ಬಗ್ಗೆ ಚರ್ಚಾಪ್ರಬಂಧವೊಂದನ್ನು ಬ್ಯಾಂಕ್ ಆಫ್ ಇಂಗ್ಲೆಂಡ್ ಅನಂತರ ಪ್ರಕಟಿಸಿತು. ಬಾಸೆಲ್ ಮೇಲ್ವಿಚಾರಕರ ಸಮಿತಿಯು ಅನುಸರಿಸಿದ ಅಭಿಗಮನಕ್ಕೆ ಈ ಪ್ರಬಂಧವು ಅನುಗುಣವಾಗಿದೆ. ಸ್ಥಿತಿ ವಿವರಣ ಪಟ್ಟಿಗಳ ಆಚೆಗಿನ ಕೆಲವಾದರೂ ಬಾಬುಗಳನ್ನು ಪರಿಗಣನೆಗೆ ತೆಗೆದುಕೊಳ್ಳುವ ಮತ್ತು ಬಾಸೆಲ್ ಮೇಲ್ವಿಚಾರಕರ ಸಮಿತಿ ಅನುಸರಿಸಿದ ಅಭಿಗಮನಕ್ಕೆ ಅನುಗುಣವಾಗಿದೆಯೆಂದು ತೋರುವ ಬಂಡವಾಳ ಅನುಪಾತಗಳನ್ನು ಕುರಿತ ಪ್ರಸ್ತಾವನೆಗಳನ್ನು ಇತರ ದೇಶಗಳು ಪರಿಗಣಿಸುತ್ತಿರುವುದನ್ನು ನೋಡುವುದು ನನಗೆ ಪ್ರೋತ್ಸಾಹದಾಯಕವಾಗಿದೆ. ಇದೊಂದು ಉಪಯುಕ್ತ ಆರಂಭ. ಮತ್ತು ಮೇಲುಸ್ತುವಾರಿಯ ಅಭಿಗಮನಗಳ ಒಗ್ಗೂಡುವಿಕೆಯತ್ತ ಇನ್ನಷ್ಟು ಕ್ರಮಗಳನ್ನು ನೋಡಲು ನಾನು ಆಶಿಸುತ್ತೇನೆ.

---

## ಓದುಗರಿಗೆ ಕೆಲವು ಪ್ರಶ್ನೆಗಳು

'ಬ್ಯಾಂಕಿಂಗ್ ಪ್ರಪಂಚ'ವನ್ನು ನೀವು ತಪ್ಪದೆ ಓದುತ್ತಿದ್ದೀರಾ? ಇದರ ವೈಶಿಷ್ಟ್ಯವೇನು? ಇದರಲ್ಲಿರುವ ಅರೆಕೊರೆಗಳು ಯಾವುವು? ಇದನ್ನು ಉತ್ತಮಪಡಿಸಲು ನಿಮ್ಮ ಸಲಹೆಗಳೇನು? ಈ ಸಂಚಿಕೆಯಲ್ಲಿ ನಿಮಗೆ ಮೆಚ್ಚುಗೆಯಾದ ಲೇಖನ ಯಾವುದು? ಏತಕ್ಕಾಗಿ?

ಈ ಪ್ರಶ್ನೆಗಳಿಗೆ ಉತ್ತರವಾಗಿ 250 ಪದಗಳಿಗೆ ಮೀರದಂತೆ ಬರೆದು ಕಳುಹಿಸಿ. ನಿಮ್ಮ ಬರಹ ನಮ್ಮ ಕೈಸೇರಲು ಕೊನೆಯ ದಿನಾಂಕ ಅಕ್ಟೋಬರ್ 31, 1990. ಉತ್ತಮ ಬರಹಗಳನ್ನು 'ಬ್ಯಾಂಕಿಂಗ್ ಪ್ರಪಂಚ'ದಲ್ಲಿ ಪ್ರಕಟಿಸಲಾಗುವುದು.

---

ಉಸ್ತುವಾರಿದಾರರಿಗೆ ಸಂಬಂಧಿಸಿದಂತೆ ಈ ಬೆಳವಣಿಗೆಗಳ ಒಂದು ಕ್ಲಿಷ್ಟ ಅಂಶವೆಂದರೆ, ಅವರು ಬ್ಯಾಂಕುಗಳು ಮತ್ತು ಇತರ ಹಣಕಾಸು ಸಂಸ್ಥೆಗಳ ನಡುವಿನ ಗೆರೆಯನ್ನು ದಾಟುವ ವಿಧಾನವನ್ನು ಕುರಿತದ್ದಾಗಿದೆ. ಇದರ ಅರ್ಥವೇನೆಂದರೆ, ಈ ರೂಪಕವನ್ನು ವಿಸ್ತರಿಸಿ ಹೇಳುವುದಾದರೆ, ಆಟದ ಮೈದಾನವು ಕೊನೆಯಿಂದ ಕೊನೆಗೆ ಮಾತ್ರವಲ್ಲದೆ ಪಕ್ಕದಿಂದ ಪಕ್ಕಕ್ಕೂ ಮಟ್ಟಸವಾಗಿರಬೇಕು. ಯಥೋಚಿತ ಸ್ಪರ್ಧಾತ್ಮಕ ಸಮತೆಯನ್ನು ಬೇರೆ ಬೇರೆ ರಾಷ್ಟ್ರಗಳ ಬ್ಯಾಂಕುಗಳ ನಡುವೆಯಲ್ಲದೆ ಬ್ಯಾಂಕುಗಳು ಮತ್ತು ಇತರ ಸಂಸ್ಥೆಗಳ ನಡುವೆಯೂ ಇರುವಂತೆ ಖಚಿತ ಪಡಿಸಬೇಕು. ಇದೇ ಸಮಯದಲ್ಲಿ ವಿನಿಯೋಜಕರಿಗೆ ಸಾಕಷ್ಟು ರಕ್ಷಣೆ ಇರಬೇಕು. ಪ್ರತಿಭೂತಿಗಳ ಸಂಸ್ಥೆಗಳು ತ್ವರಿತವಾಗಿ ವಿಶ್ವಾದ್ಯಂತ ಜಾಲಗಳನ್ನು ಸ್ಥಾಪಿಸುತ್ತಿರುವ ಸಂಗತಿಯು 1970ರ ದಶಕದ ಆರಂಭದಲ್ಲಿ ಬ್ಯಾಂಕಿಂಗ್ ಉಸ್ತುವಾರಿದಾರರು ಎದುರಿಸುತ್ತಿದ್ದಂತಹ ಸಮಸ್ಯೆಗಳನ್ನೇ ಉಂಟುಮಾಡುತ್ತದೆ. ಗಡಿಗಳಾಚೆಗೂ ವ್ಯವಹಾರ ನಡೆಸಲಾಗುತ್ತಿದೆ. ಅಥವಾ ಒಂದು ದೇಶದ ವ್ಯಾಪ್ತಿಗೆ ಒಳಪಟ್ಟದ್ದು ಮತ್ತೊಂದು ದೇಶದಲ್ಲಿ ಕಾರ್ಯಾಚರಣೆಯಲ್ಲಿ ತೊಡಗಿರುವ ಸಂಸ್ಥೆಗಳಿಂದಲೂ ಇದು ನಡೆಯುತ್ತಿದೆ. ಒಂದು ಕೇಂದ್ರದಲ್ಲಿ ಪ್ರಕಟಿತ ಪಟ್ಟಿಯಲ್ಲಿ ಸೇರಿಸಿದ ಪ್ರತಿಭೂತಿಗಳು ಬೇರೆಡೆಯಲ್ಲಿ ಚುರುಕಾಗಿ ವ್ಯಾಪಾರವಾಗುತ್ತಿದೆ.

ಸಾಲಗಾರರು ವಿವಿಧ ಮಾರುಕಟ್ಟೆಗಳಿಂದ ಏಕಕಾಲದಲ್ಲಿ ಹಣಪಡೆಯಲು ಯತ್ನಿಸುತ್ತಾರೆ. ಈ ಎಲ್ಲ ಕಾರ್ಯಚಟುವಟಿಕೆಗಳು ಮುಖ್ಯಪ್ರಶ್ನೆಗಳನ್ನು ಎತ್ತುತ್ತವೆ. ಮತ್ತು ಕಾರ್ಯಕಾರಿ ಸಂಬಂಧವನ್ನು ಹಾಗೂ ಗೌಪ್ಯ ಮಾಹಿತಿಯನ್ನು ವಿನಿಯಮನ ಮಾಡಿಕೊಳ್ಳುವ ಸಾಧನವನ್ನು ಸ್ಥಾಪಿಸುವ ಬಗ್ಗೆ ವಿವಿಧ ದೇಶಗಳಲ್ಲಿ ಪ್ರತಿಭೂತಿ ನಿಯಂತ್ರಕರ ಅಗತ್ಯವನ್ನು ತೋರಿಸುತ್ತವೆ. ಈ ದೇಶಗಳಲ್ಲಿ ಹಣಕಾಸು ಸೇವೆಗಳ ಶಾಸನವು ಉಸ್ತುವಾರಿ ಚೌಕಟ್ಟೊಂದನ್ನು ನೆಲೆಗೊಳಿಸುತ್ತದೆ. ಮತ್ತು ಇದರ ಅಡಿಯಲ್ಲಿ ಪ್ರತಿಭೂತಿಗಳ ಮತ್ತು ವಿನಿಯೋಜಕರ ಮಂಡಳಿ ಅನೇಕ ಸ್ವನಿಯಂತ್ರಕರ ಸಂಘಟನೆಗಳನ್ನು ಮಾನ್ಯಮಾಡುವುದು. ಪ್ರತಿಯಾಗಿ ಇವು ವಿವಿಧ ಮಾರುಕಟ್ಟೆ ವಲಯಗಳಲ್ಲಿನ ಸಂಸ್ಥೆಗಳ ನಡವಳಿಕೆಯನ್ನು ನಿಯಂತ್ರಿಸುವುದು. ಈ ಸ್ವಯಂ ನಿಯಂತ್ರಕ ಸಂಘಟನೆಗಳಲ್ಲಿ ಒಂದಕ್ಕಿಂತ ಹೆಚ್ಚಿನವುಗಳ ಉಸ್ತುವಾರಿಯ ಅಡಿಯಲ್ಲಿ ಹಣಕಾಸು ಸಮೂಹವೊಂದು ಬರಬಹುದು ಮತ್ತು ಅದು ಒಂದು ಬ್ಯಾಂಕ್ ಆಗಿದ್ದಲ್ಲಿ ಬ್ಯಾಂಕಿಂಗ್ ಅಧಿನಿಯಮದ ಪ್ರಕಾರ ಬ್ಯಾಂಕ್ ಆಫ್ ಇಂಗ್ಲೆಂಡಿನ ಉಸ್ತುವಾರಿಗೂ ಒಳಪಡುತ್ತದೆ.

ಬ್ಯಾಂಕಿಂಗ್ ಮತ್ತು ಇತರ ಬಗೆಗಳ ವ್ಯವಹಾರಗಳನ್ನು ಕಾನೂನಿಕವಾಗಿ ಪ್ರತ್ಯೇಕಗೊಳಿಸಲಾಗಿರುವಂತಹ ದೇಶಗಳಲ್ಲಿ ಈ ನಿಯಂತ್ರಣಾತ್ಮಕ ಅತಿವ್ಯಾಪ್ತಿಗಳಲ್ಲಿ ಕೆಲವು ಅಷ್ಟೊಂದು ತೀವ್ರವಾಗಿ ಉದ್ಭವಿಸುವುದಿಲ್ಲ. ಏನೇ ಇರಲಿ, ಬಹುತೇಕ ಪ್ರಕರಣಗಳಲ್ಲಿ ನಾನು ವಿವರಿಸುತ್ತಿರುವ ಬದಲಾವಣೆಗಳು ಕಾನೂನಿನ ಪ್ರಭೇದಗಳ ಮೇಲೆ ಅಧಿಕಾಧಿಕ ಒತ್ತಡವನ್ನು' ಬೀರುತ್ತಿವೆ. ಬ್ಯಾಂಕಿಂಗ್ ಮತ್ತು 'ಬಂಡವಾಳ ಮಾರುಕಟ್ಟೆಗಳ ಪರಸ್ಪರ ಹತ್ತಿರವಾಗುತ್ತಿರುವ ಮತ್ತು ಸಾಲಗಾರರು ಅವುಗಳ ನಡುವೆ ಚಲಿಸುತ್ತಿರುವ ಬ್ಯಾಂಕಿಂಗ್ ಮತ್ತು ಪ್ರತಿಭೂತಿಗಳ ಮೇಲ್ವಿಚಾರಕರು ಈಗ ಅಂತರರಾಷ್ಟ್ರೀಯವಾಗಿ ತಮ್ಮ ಚಿಂತನೆಯನ್ನು ಒಟ್ಟುಗೂಡಿಸಬೇಕಲ್ಲವೆ ? ಈ ದೇಶದಲ್ಲಿ, ಹಣಕಾಸು ಸಮೂಹಗಳ ಉಸ್ತುವಾರಿಯ ಕಾರ್ಯಉಳ್ಳವರು, ಅವುಗಳ ನಿಯಂತ್ರಣಾತ್ಮಕ ಚಟುವಟಿಕೆಗಳನ್ನು ಮತ್ತು ಹೊಣೆಗಳನ್ನು ಸಂಯೋಜಿಸಲು ಕಾರ್ಯವಿಧಾನಗಳನ್ನು ಈಗಾಗಲೇ ಚರ್ಚಿಸುತ್ತಿದ್ದಾರೆ. ವರದಿ ಮಾಡುವ ಪುನರಾವರ್ತನೆಯನ್ನು ಕನಿಷ್ಠಗೊಳಿಸಲು ಮತ್ತು ಕ್ರಿಯೆಯನ್ನು ಸಂಯೋಜಿಸುವ ಸಲುವಾಗಿ ಒಡಂಬಡಿಕೆಗಳಿಗೆ ಬರಬಹುದು ಎಂಬುದು ಮುಖ್ಯ. ಯಾವ ಪರಿನಿಯತ ಹೊಣೆಗಳಡಿಯಲ್ಲಿ ಬೇರೆಬೇರೆ ನಿಯಂತ್ರಕರು ಕಾರ್ಯಾಚರಣೆ ಮಾಡಬೇಕೋ, ಅಂತಹ ಹೊಣೆಗಳನ್ನು ಉಲ್ಲಂಘಿಸದೇ ಇರುವುದು ಅಥವಾ ವ್ಯವಹಾರಗಳು ಅನಿಯಂತ್ರಿತವಾಗಿ ನುಸುಳಿಕೊಳ್ಳಬಹುದಾದ ಅಂತರಗಳನ್ನು ಉಂಟುಮಾಡದೇ ಇರುವುದು ಮುಖ್ಯ.

## ಹಣಕಾಸು ವ್ಯವಸ್ಥೆಗಳಿಗೆ ವಸ್ತುಗಳು

ಈ ಉಸ್ತುವಾರಿ ಅಂಶಗಳಂತೆಯೇ. ಈಚಿನ ನವಪ್ರವರ್ತನೆಗಳ ಅಂತರರಾಷ್ಟ್ರೀಯ ಹಣಕಾಸು ವ್ಯವಸ್ಥೆಯ ಕಾರ್ಯಾಚರಣೆಗಾಗಿ ಕೆಲವು ವ್ಯಾಪಾರ ಅಂಶಗಳನ್ನು ಪ್ರಸ್ತಾಪಿಸುತ್ತೇನೆ. ಅವು ಸಾರ್ವಜನಿಕವಾಗಿ ಲಭ್ಯವಿರುವ ಮಾಹಿತಿಯ ಗುಣಮಟ್ಟ, ಹೊಸ ಸಂಲೇಖಗಳ ಪೈಕಿ ಹಲವದರ ಸಂಕೀರ್ಣತೆ ಹಾಗೂ ನಷ್ಟಸಂಭಾವ್ಯತೆ ಮತ್ತು ಬ್ಯಾಂಕಿನಿಂದ ಬಾಂಡು ಮಾರುಕಟ್ಟೆ ಹಣಕಾಸಿಗೆ ಬದಲಾವಣೆಯ ಪರಿಣಾಮಗಳನ್ನು ಕುರಿತಂತೆ ಇರುತ್ತವೆ. ಈ ಅಂಶಗಳು ಒಂದು ಕೇಂದ್ರ ಬ್ಯಾಂಕಿನ ಅಧ್ಯಯನ ತಂಡದಿಂದ ಚರ್ಚಿತವಾದವು ಹಾಗೂ ಅದರ ವರದಿಯು –ಈ ವಿಷಯದಲ್ಲಿ ಆಸಕ್ತಿ ಇರುವ ಯಾರಿಗಾದರೂ ಇದನ್ನು ನಾನು ಶಿಫಾರಸು ಮಾಡುತ್ತೇನೆ–ಅಂತರರಾಷ್ಟ್ರೀಯ ಇತ್ಯರ್ಥಗಳ ಬ್ಯಾಂಕಿನಿಂದ ಲಭ್ಯವಿದೆ.

## ಮಾಹಿತಿ ಅರಿವುಗಳು

ವೈಯಕ್ತಿಕ ಸಂಸ್ಥೆಗಳನ್ನು ಕುರಿತ, ಸಾರ್ವಜನಿಕವಾಗಿ ಲಭ್ಯವಿರುವ, ಮಾಹಿತಿಯು, ಅವು ಚಟುವಟಿಕೆಯ ಹೊಸ ಕ್ಷೇತ್ರಗಳಿಗೆ ಪ್ರವೇಶಿಸಿದಂತೆಲ್ಲ (ಇಂಥವುಗಳ ಲೆಕ್ಕ ಕಾರ್ಯತತ್ವಗಳನ್ನು ಬಹಿರಂಗಗೊಳಿಸುವುದು ಸಾಮಾನ್ಯವಾಗಿ ಇನ್ನೂ ಅಗತ್ಯವಾಗಿರುವುದಿಲ್ಲ), ಕಡಿಮೆ ಸ್ಪಷ್ಟವಾಗುತ್ತದೆ ಎಂಬುದು ಹೊಸ ಸಂಲೇಖಗಳ ಹಾಗೂ ತಂತ್ರಗಳ ಸರಣಿಯೊಂದನ್ನು ಚಾಲ್ತಿಗೆ ತಂದದ್ದರ ಒಂದು ಪರಿಣಾಮವಾಗಿರುತ್ತದೆ. ಸಾಮಾನ್ಯವಾಗಿ ಹೇಳುವುದಾದರೆ ಠೇವಣಿದಾರ ಮತ್ತು ಮುಂಗಟ್ಟೆ ಕಕ್ಷಿಗಳ ಉದರಿ ಅರ್ಹತೆ ಬಗ್ಗೆ ಜ್ಞಾನಪೂರ್ಣ ನಿರ್ಣಯ ತೆಗೆದುಕೊಳ್ಳುವ ಬಗ್ಗೆ ಅವರಿಗಾಗಿ ಬ್ಯಾಂಕುಗಳು ತಮ್ಮ ಚಟುವಟಿಕೆಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ಒದಗಿಸುವುದು ಅಪೇಕ್ಷಣೀಯ. ಮುಖ್ಯ ಒಡ್ಡುವಿಕೆಗಳ ಪ್ರಮುಖ ಬಗೆಗಳನ್ನು ಕುರಿತು ಮಾಹಿತಿ ಲಭ್ಯವಿಲ್ಲದಿರುವುದರಿಂದ, ಹಾಗೆ ಮಾಡುವ ಅವರ ಸಾಮರ್ಥ್ಯ ಕಡಿಮೆಯಾಗುವುದೆಂಬುದು ಸ್ಪಷ್ಟ. ಐರೋಪ್ಯ ಸಮುದಾಯದೊಳಗೆ ಉದ್ದೇಶಿತ ಬ್ಯಾಂಕ್ ಖಾತೆಗಳ ನಿರ್ದೇಶದ ಬಗ್ಗೆ ಚರ್ಚೆಗಳು ಮುಂದುವರಿಯುತ್ತವೆ. ಬ್ಯಾಂಕಿನ ಸ್ಥಿತಿ ವಿವರಣ ಪಟ್ಟಿಯ ಆಚೆಗಿನ ಹೊಣೆಗಳ ಪ್ರಕಟನೆಯ ಕನಿಷ್ಠ ಮಟ್ಟವೊಂದನ್ನು ದೊರಕಿಸಿಕೊಡುವ ನಮೂನೆಯೊಂದನ್ನು ತಯಾರಿಸುವುದು ಉದ್ದೇಶ. ಅದು ಮುಂದೆ ಜಾರಿಗೆ ಬರಬಹುದಾದ ಸಂಲೇಖಗಳ ಅಗತ್ಯಗಳನ್ನು ಪೂರೈಸುವಷ್ಟು ಮಟ್ಟಿಗೆ ನಮ್ಯವಾಗಿರಬೇಕು ಮತ್ತು ಅದು ಸದಸ್ಯ ದೇಶಗಳ ಮಾರುಕಟ್ಟೆಗಳ ಅಭಿವೃದ್ಧಿಗೆ ಯುಕ್ತವಾದ ಹೆಚ್ಚಿನ ಪ್ರಕಟಣೆಗೆ ಅವಕಾಶ ಮಾಡಿಕೊಡುವಂತಿರಬೇಕು. ಈ ನಿರ್ದೇಶವು ಐರೋಪ್ಯ ಸಮುದಾಯದ ಬ್ಯಾಂಕುಗಳ ಬಗ್ಗೆ ಲಭ್ಯವಿರುವ ಒಂದು ಉತ್ಕೃಷ್ಟ ಮಾಹಿತಿಯ ಅಮೂಲ್ಯ ಕೊಡುಗೆಯಾಗುವುದೆಂದು ಮತ್ತು ಇದರಿಂದ ಈ ಬ್ಯಾಂಕುಗಳು ಮತ್ತು ಇದೇ ತೆರನಾದ ಗುಣಮಟ್ಟಗಳುಳ್ಳ ದೇಶಗಳ ಬ್ಯಾಂಕುಗಳಿಗೆ ಉತ್ತಮ ಹೋಲಿಕೆಗಳು ಸಾಧ್ಯವಾಗುವುವೆಂದು ನಾವು ಆಶಿಸುತ್ತೇವೆ. ಬೇರೆ ಬೇರೆ ದೇಶಗಳು ಹಿಂದೆ ಬೀಳಬೇಕಾಗದಿದ್ದರೆ ತಮ್ಮ ಸ್ವಂತ ನೆಲೆಗಳನ್ನು ಪರಿಶೀಲಿಸಲು ಆಶಿಸಬಹುದು.

ಅಂತರರಾಷ್ಟ್ರೀಯ ಇತ್ಯರ್ಥಗಳ ಬ್ಯಾಂಕಿನಂತಹ ಸಂಸ್ಥೆಗಳಿಂದ ಸಂಗ್ರಹಿಸಲ್ಪಟ್ಟ ಹಾಗೂ ಪ್ರಕಟವಾಗಿರುವ ಅಧಿಕೃತ ಅಂಕಿ ಅಂಶಗಳ ವ್ಯಾಪಕತ್ವಕ್ಕೆ ಕೂಡ ಧಕ್ಕೆಯುಂಟಾಗಿದೆ. ಉದಾಹರಣೆಗೆ, ಬ್ಯಾಂಕಿಂಗಿನಿಂದ ಪ್ರತಿಭೂತಿ ಮಾರುಕಟ್ಟೆಯೆಡೆಗೆ ಆಗಿರುವ ಬದಲಾವಣೆಯಿಂದಾಗಿ ಸಾಪೇಕ್ಷವಾಗಿ ಪ್ರಾಮುಖ್ಯ ಪಡೆಯುತ್ತಿರುವ, ಬ್ಯಾಂಕುಗಳು ಹೊಂದಿರುವ ಪ್ರತಿಭೂತಿಗಳನ್ನು ಕುರಿತ ವಿವರಗಳಲ್ಲಿ ಕೊರತೆಯುಂಟಾಗಿದೆ. ಈ ಕೊರತೆಯನ್ನು ತುಂಬಲೋಸುಗ ನಾವು ಬ್ರಿಟನ್ನಿನಲ್ಲಿ ನೀಡಿಕೆ ಮಾಡಿದವರ ದೇಶಗಳಿಂದ ಪಡೆದುಕೊಂಡ, ಬ್ಯಾಂಕುಗಳು ಹೊಂದಿರುವ ಪ್ರತಿಭೂತಿಗಳ ಬಗ್ಗೆ ಮಾಹಿತಿ ಸಂಗ್ರಹಣೆಯನ್ನು ಪ್ರಾರಂಭಿಸಿದ್ದೇವೆ. ಹಾಗೂ ಇವನ್ನು ನಮ್ಮ ಪ್ರಕಟಿತ ಅಂಕಿ ಅಂಶಗಳಲ್ಲಿ ಈಗ ಸೇರಿಸಲಾಗಿದೆ. ಆದಾಗ್ಯೂ ಅಂತರರಾಷ್ಟ್ರೀಯ ಇತ್ಯರ್ಥಗಳ ಬ್ಯಾಂಕಿನ ಅಂಕಿ ಅಂಶಗಳಿಗೆ ಪ್ರಮುಖ ಪಾಲು ಸಲ್ಲಿಸುವ ಎರಡು ದೇಶಗಳು ಇಂತಹದೇ ಮಾಹಿತಿಯನ್ನು ನೀಡಲು ಅಸಮರ್ಥವಾಗಿರುವುದು ದುರದೃಷ್ಟಕರ.

## ನಷ್ಟಸಂಭಾವ್ಯತೆಯ ಮಾಪನದಲ್ಲಿ ಬರುವ ಕಷ್ಟಗಳು

ಬಾಹ್ಯ ವಲಯದವರಿಗೆ (ಹೊರಗಿನವರಿಗೆ) ಹೊಸ ತಂತ್ರಗಳಲ್ಲಿ ಹಲವುಗಳ ಕ್ಲಿಷ್ಟತೆಯಿಂದಾಗಿ

ಕಂಪನಿಯು ಒಡ್ಡುವಿಕೆಯ ಬೆಲೆ ಕಟ್ಟುವುದು ಕಷ್ಟಕರವಾದರೂ ಅದು ವ್ಯವಸ್ಥಾಪಕರಿಗೆ ಮತ್ತು ನಿರ್ದೇಶಕರಿಗೆ ಇನ್ನೂ ಹೆಚ್ಚು ಕಷ್ಟಕರವಾಗಬಹುದು. ಹಲವು ಸಂಲೇಖಗಳು ಒಡ್ಡುವಿಕೆಯ ಮಾಪನಕ್ಕೆ ಬಹಳ ಗಣನೀಯವಾದ ತಾಂತ್ರಿಕ ಮತ್ತು ಪರಿಕಲ್ಪನೆಯ ಸಮಸ್ಯೆಗಳನ್ನು ಒಡ್ಡುತ್ತದೆ. ಅತಿ ಸೂಕ್ಷ್ಮವಾದ ಗಣಿತಶಾಸ್ತ್ರೀಯ ಸೂತ್ರಗಳಿಂದಾಗಿ ಒಂದು ತಪ್ಪಾದರೂ ಹೆಚ್ಚು ಬೆಲೆ ತೆರಬೇಕಾಗಬಹುದು. ಅಲ್ಲದೆ ಹಲವು ಪ್ರಕರಣಗಳಲ್ಲಿ ಒಳಗೊಂಡಿರುವ ತಾಂತ್ರಿಕ ಸಮಸ್ಯೆಗಳು ಕೆಲವೇ ಪರಿಣತರಿಗೆ (ತಜ್ಞರಿಗೆ) ತಿಳಿದಿದೆ. ಆದರೂ ಸಂಲೇಖಗಳ ಪೂರ್ಣಶ್ರೇಣಿಗೆ ಸಂಸ್ಥೆಯ ಒಡ್ಡುವಿಕ್ರಯಮಾಪನ ಮಾಡಲು ಮತ್ತು ನಿಯಂತ್ರಿಸಲು ವ್ಯವಸ್ಥಾಪಕರು ಒಂದು ತಕ್ಕ ವ್ಯವಸ್ಥೆಯನ್ನು ಇಟ್ಟುಕೊಳ್ಳುವುದು ಈಗಲೂ ಮುಖ್ಯ, ಖಂಡಿತವಾಗಿಯೂ ಎಂದಿಗಿಂತಲೂ ಹೆಚ್ಚು ಮುಖ್ಯ.

ನಾನು ಚರ್ಚಿಸುತ್ತಿರುವ ಕೆಲವು ಸಂಲೇಖಗಳು ಸಾಂಪ್ರದಾಯಿಕ ಬ್ಯಾಂಕಿಂಗ್ ವಹಿವಾಟಿನಲ್ಲಿ ಒಟ್ಟುಗೂಡಿಸಲ್ಪಟ್ಟ ಹಲವು ಮೂಲಾಂಶಗಳನ್ನು ಬೇರೆಬೇರೆಯಾಗಿ ಬಿಡಿಸಲು ಸಾಧ್ಯವಾಗುವಂತೆ ಮಾಡುತ್ತವೆ. ಉದರಿ ನಷ್ಟ ಸಂಭವ ಸಂದರ್ಭಗಳಿಗೆ ಒಂದು ಸಂಸ್ಥೆಯು ನಿಯಮಿತವಾದ ಒಡ್ಡುವಿಕೆಯನ್ನು ಒಪ್ಪಿಕೊಳ್ಳುವಾಗ ಉಂಟಾಗುವ ಬಡ್ಡಿ ಹಾಗೂ ವಿನಿಮಯ ದರಗಳ ಬದಲಾವಣೆಯನ್ನು ಗುರುತಿಸಿಕೊಂಡು ಸೂಕ್ತ ಬದಲಾವಣೆ ಮಾಡಿಕೊಳ್ಳಲು ಇವುಗಳು ಉಪಯೋಗವಾಗಬಹುದು. ಇದರ ಪರಿಣಾಮವಾಗಿ ಒಂದು ಸಂಸ್ಥೆಯು ಒಡ್ಡಿಕೊಳ್ಳುವಿಕೆಯನ್ನು ತನ್ನ ಗುರಿ ಹಾಗೂ ಅಪೇಕ್ಷೆಗಳಿಗೆ ಅನುಗುಣವಾಗಿ, ಸೂಕ್ಷ್ಮ ನಿಖರತೆಯೊಂದಿಗೆ, ಸೂಕ್ಷ್ಮಸಂವೇದಿಗೊಳಿಸಲು ತನ್ನ ಸದ್ಯದ ಪರಿಸ್ಥಿತಿಯನ್ನು ನಷ್ಟ ನಿರೋಧಕವಾಗಿ ಮಾಡಿಕೊಳ್ಳಲು ಅಥವಾ ಹೊಸ ಸ್ಥಿತಿಯನ್ನು ಪಡೆಯಲು ಸಾಧ್ಯವಾಗಬಹುದು. ಇದು ಆರ್ಥಿಕ ಸೇವೆ ಪಡೆಯುವ ಗ್ರಾಹಕರಿಗೆ ಸ್ವಾಭಾವಿಕವಾಗಿ ಲಾಭದಾಯಕವಾಗುತ್ತದೆ. ಆದರೆ ಬೇರೆಬೇರೆಯಾಗಿ ಬಿಡಿಸುವ ಈ ಕ್ರಿಯೆಯ ಬಗ್ಗೆ ಎರಡು ಅವಲೋಕನಗಳನ್ನು ನಾನು ಮಾಡಲಿಚ್ಛಿಸುತ್ತೇನೆ.

ಪ್ರಥಮವಾಗಿ ಈ ಹೊಸ ಸಂಲೇಖಗಳು ತಮ್ಮ ಬೆಲೆಗಳಲ್ಲಿ ಇಳುವರಿಯಾಗುವ ಪ್ರವೃತ್ತಿಯನ್ನು ಹೊಂದಬಹುದಾದ ಸಂದರ್ಭಗಳೂ ಉಂಟು. ನಿಜವಾಗಿಯೂ ಈ ಕಾರ್ಯದಲ್ಲಿ ದೊರೆಯುತ್ತಿರುವ ಆರ್ಥಿಕ ಸೇವೆಯ ಒಟ್ಟು ಬೆಲೆಗಳು ಇಳುವರಿಯಾಗಲೇಬೇಕು. ಏಕೆಂದರೆ ಸಂಭವಿಸಬಹುದಾದ ಆರ್ಥಿಕ ನಷ್ಟವನ್ನು ಭರಿಸಬಲ್ಲ ಅನುಕೂಲಸ್ಥರ ಮೇಲೆ ಅದು ಮರುಹಂಚಲ್ಪಡುತ್ತದೆ. ಆದರೆ ಕೆಲವು ಸಂದರ್ಭಗಳಲ್ಲಿ ಈ ಆರ್ಥಿಕ ಸೇವೆಯ ಬೆಲೆಯ ಇಳುವರಿಯು ನ್ಯಾಯಸಮ್ಮತವಾದುದಕ್ಕಿಂತಮೀರಿದಂತೆ ಕಾಣಿಸುತ್ತದೆ. ಇಂತಹ ಸಂದರ್ಭಗಳು ಉಸ್ತುವಾರಿದಾರರಿಗೆ ಎಚ್ಚರಿಕೆಯ ಸಂಕೇತವಾಗಿ, ಸಂಸ್ಥೆಗಳು ಈ ನಷ್ಟವಾಗಬಹುದಾದ ಸಂದರ್ಭಗಳನ್ನು ಗುರುತಿಸಿ ಈ ಆರ್ಥಿಕ ಗಂಡಾಂತರವನ್ನು ಎದುರಿಸಲು ತಮ್ಮ ಬಂಡವಾಳಗಳಲ್ಲಿ ಸಾಕಷ್ಟು ವಿಸ್ತಾರವನ್ನು ಹೊಂದುವುದನ್ನು ಉಸ್ತುವಾರಿದಾರರು ಖಾತರಿಗೊಳಿಸಬೇಕು.

ಎರಡನೆಯದಾಗಿ ನಷ್ಟ ಸಿರೋಧ ಸಂಲೇಖಗಳು ಹೆಚ್ಚು ಕಡಿಮೆ ಯಾವಾಗಲೂ ಒಳಪಟ್ಟಿರುವ ಒಂದು ಅಥವಾ ಎರಡೂ ಗುಂಪಿಗೆ ಉದರಿ ಗಂಡಾಂತರವನ್ನು ತಂದೊಡ್ಡುತ್ತದೆ. ಅಂತರರಾಷ್ಟ್ರೀಯ ಇತ್ಯರ್ಥಗಳ ಅದಲುಬದಲು ಇದಕ್ಕೊಂದು ಉದಾಹರಣೆ. ಈ ಅದಲುಬದಲು ವ್ಯವಹಾರವು ಬಡ್ಡಿಯಲ್ಲಿ ಆಗುವ ನಷ್ಟವನ್ನಾಗಲಿ, ವಿನಿಮಯದಲ್ಲಿ ಆಗುವ ನಷ್ಟದ ಗಂಡಾಂತರವನ್ನಾಗಲಿ ತುಂಬಬಹುದು, ಆದರೆ ಉದರಿಯಲ್ಲಿ ಆಗುವ ನಷ್ಟದ ಗಂಡಾಂತರದ ಸರಪಣಿಯೊಂದು ಹಾಗೆಯೇ ಉಳಿದುಬಿಡುತ್ತದೆ. ಇದು ಚಲಾರ್ಥದಲ್ಲಿ ಆಗುವ ಅದಲುಬದಲು ಕ್ರಿಯೆಯಲ್ಲಿ ಪರಸ್ಪರ ದೊಡ್ಡದಾಗಿಯೇ ಇರಬಹುದು.

ಎಲ್ಲ ಹಣಕಾಸು ಮಾರುಕಟ್ಟೆಗಳಲ್ಲಿಯೂ ವ್ಯಾಪಾರದ ಮೇಲಿರುವ ಹೆಚ್ಚು ಒತ್ತು ಅತಿಯಾಗಿ ಹೆಚ್ಚುತ್ತಿರುವ ವ್ಯಾಪಾರದ ಮೊತ್ತಕ್ಕೆ ಕಾರಣವಾಗಿದೆ. ಈ ವ್ಯವಹಾರಗಳು ಸಾಮಾನ್ಯವಾಗಿ ಮಾರುಕಟ್ಟೆಯಲ್ಲಿ ಭಾಗೀದಾರೀ ಇತ್ಯರ್ಥದ ಒಡ್ಡುವಿಕೆಯಲ್ಲಿ ಚೇತರಿಸಿಕೊಳ್ಳುತ್ತವೆ. ಇತ್ಯರ್ಥವ್ಯವಸ್ಥೆಗಳು ಸುಗಮವಾಗಿ ಸಾಗುವವರೆಗೆ ಇದನ್ನು ನಿರ್ವಹಿಸಬಹುದು. ಹೆಚ್ಚುತ್ತಿರುವ ಅಂತರರಾಷ್ಟ್ರೀಯ ವ್ಯವಹಾರಗಳು ನಾಜೂಕಿನ ತಾಂತ್ರಿಕತೆಯ ಅವಲಂಬನೆಯನ್ನು ಹೆಚ್ಚಾಗಿ ನಚ್ಚಿಕೊಂಡಿರುವುದರಿಂದ ಇದು ಹಣಕಾಸು ವ್ಯವಸ್ಥೆಗೆ ಭೇದ್ಯ ಕ್ಷೇತ್ರವಾಗಬಹುದು.

## ಬಿಕರಿಯೋಗ್ಯ ಆಸ್ತಿಗಳಿಗೆ ಬದಲಾವಣೆ

ಬ್ಯಾಂಕಿನಿಂದ ನೇರವಾಗಿ ಸಾಲ ನೀಡುವಿಕೆಯ ವೆಚ್ಚದಲ್ಲಿ ಪ್ರತಿಭೂತಿಗಳ ಮಾರುಕಟ್ಟೆಗಳ ಬೆಳವಣಿಗೆಯನ್ನು ವ್ಯವಹರಿಸಬಹುದಾದ ಆಸ್ತಿಗಳ ಅಪೇಕ್ಷೆಯು ಪ್ರೋತ್ಸಾಹಿಸುತ್ತದೆ. ಆದಾಗ್ಯೂ ಬ್ರಿಟನ್ ಇತ್ತೀಚಿನವರೆಗೆ ಈ ನಿಟ್ಟಿಗೆ ಹೊರತಾಗಿತ್ತು. ಮುಖ್ಯವಾಗಿ ನಾವು ಅನುಭವಿಸಿದ ಅತಿ ಪ್ರಸರಣದ ಫಲದಿಂದಾಗಿ ಕಳೆದ ಹತ್ತು ವರ್ಷಗಳಿಂದ ಸುಪ್ತವಾಗಿದ್ದ ನಮ್ಮ ಆಂತರಿಕ ಕಂಪನಿ ಬಾಂಡು ಮಾರುಕಟ್ಟೆಯ ಪುನರುಜ್ಜೀವನ ಈಗ ತಾನೇ ಆರಂಭವಾಗಿದೆ. ಬಾಂಡು ಮಾರುಕಟ್ಟೆಯ ಹಣಕಾಸಿನಲ್ಲಿಯ ಹೆಚ್ಚಳ ಸ್ವಾಗತಾರ್ಹ. ಏಕೆಂದರೆ ಇದು ರೂಢಿಗತ ಹಣಕಾಸು ನೀಡಿಕೆ ವ್ಯವಸ್ಥೆಗೆ ಹಿಂತಿರುಗುವುದನ್ನು ಪ್ರತಿನಿಧಿಸುತ್ತದೆ.

ಹೇಗಾದರೂ, ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಆಗುತ್ತಿರುವಹಾಗೆ, ಒಂದುವೇಳೆ ಅತ್ಯುತ್ತಮ ಗುಣಮಟ್ಟದ ಸಾಲಗಾರರು ಹಣಕಾಸು ವ್ಯವಸ್ಥೆಗೆ, ಪ್ರತಿಭೂತಿ ಮಾರುಕಟ್ಟೆಗಳ ಕಡೆಗೆ ತಿರುಗಿದರೂ ಸಹ ಇದು ಖಂಡಿತವಾಗಿಯೂ ಆ ಬ್ಯಾಂಕಿನ ಆಸ್ತಿ ವಿನಿಯೋಜನ ವಿನ್ಯಾಸಗಳ ಗುಣಮಟ್ಟದ ಮೇಲೆ ಪ್ರಭಾವ ಬೀರುತ್ತದೆ.

ಪ್ರತಿಭೂತಿ ಮಾರುಕಟ್ಟೆಗಳೆಡೆಗಿನ ಬದಲಾವಣೆಯಿಂದ ದೀರ್ಘಾವಧಿ ಉದರಿ ನಿರ್ಧಾರಣೆಗಳಲ್ಲಿನ ಗುಣಮಟ್ಟವೂ ದುರ್ಬಲವಾಗುವುದೆಂದೂ ಸಹ ನನಗೆ ಅನಿಸುತ್ತದೆ. ಸಾಲಗಾರನೊಬ್ಬನ ಪಾಲನೆಯನ್ನು ನಿಗಾಮಾಡಲು ಬಾಂಡು ವಿನಿಯೋಜಕರುಗಳ ಬಗೆಬಗೆಯ ಜನಗಳ ಗುಂಪಿಗಿಂತ, ಸಾಲ ನೀಡುವ ಬ್ಯಾಂಕುಗಳ ಸಣ್ಣ ತಂಡವೊಂದು ಹೆಚ್ಚು ಸಜ್ಜಿತವಾಗಿರುತ್ತದೆ. ಒಂದುವೇಳೆ ಮಾರುಕಟ್ಟೆಯು ವ್ಯಾಪಾರಿಗಳಿಂದ ಚಾಲನೆ ಪಡೆದರೆ ಅಲ್ಪಾವಧಿ ಮಾರುಕಟ್ಟೆ ಅವಕಾಶಗಳ ಆಧಾರದ ಮೇಲೆ ದೀರ್ಘಾವಧಿ ಉದರಿ ನಿರ್ಧಾರಗಳನ್ನು ತೆಗೆದುಕೊಳ್ಳಬಹುದು. ದೀರ್ಘಾವಧಿ ಸಾಲವೊಂದನ್ನು ಪಕ್ವತೆಯವರೆಗೆ ಹೊಂದಿರುವ ನಿರೀಕ್ಷೆಯಲ್ಲಿರುವ ಬ್ಯಾಂಕೊಂದು ಸಾಲದ ಅದೇ ಅವಧಿಗೆ ತಾನು ಜೋತುಬಿದ್ದಿರುವೆನೆಂದು ಭಾವಿಸದಿರಬಹುದಾದ ಬಾಂಡುವಿನಿಯೋಜನೆಗಿಂತ ಭಿನ್ನವಾದ ಕ್ರಮಗಳನ್ನು ಅನ್ವಯಿಸಬಹುದು, ಆದರೆ ಅನೇಕ ಹೊಸ ಸಂಲೇಖಗಳಿಗೆ ಸಂಬಂಧಿಸಿದಂತೆ, ಮಾರಾಟಯೋಗ್ಯವಾದದ್ದೆಲ್ಲ ದ್ರವತ್ವ ಉಳ್ಳದ್ದು ಎಂಬ ನಂಬಿಕೆಯ ಪರೀಕ್ಷೆ ಇನ್ನೂ ಆಗಿಲ್ಲ· ಖರೀದಿದಾರರು ಸಿಗುವಷ್ಟು ಮಟ್ಟಿಗೆ ಮಾತ್ರ ಅವು ದ್ರವತ್ವ ಉಳ್ಳವು ಎನ್ನುವುದು ಸ್ಪಷ್ಟ. ಒಂದು ಕಕ್ಷಿಗೆ ದ್ರವತ್ವದ ಭರವಸೆ ಬೇಕಾಗಿದೆ ಎನ್ನುವುದಾದರೆ, ಇದು, ಇನ್ನೊಂದು ಕಕ್ಷಿಯು ಅದನ್ನು ಒದಗಿಸುವ ಹೊಣೆಯನ್ನು ಒಪ್ಪಿಕೊಳ್ಳಬೇಕು ಎಂದಾಗುತ್ತದೆ. ಉದಾಹರಣೆಗೆ ಉದರಿ ಪತ್ರ (Note) ನೀಡಿಕೆ ಸೌಲಭ್ಯದ ಅಡಿಯಲ್ಲಿ ಬ್ಯಾಂಕಿನ ಬದ್ಧತೆಗಳು ದ್ರವತ್ವ ಬದ್ಧತೆಗಳನ್ನು—ಅಲ್ಲದೆ ಸಂಭಾವ್ಯ ನಷ್ಟ ಗಂಡಾಂತರಗಳನ್ನೂ—ಒಳಗೊಳ್ಳುತ್ತವೆ. ಎಂಬುದನ್ನು ಗುರುತಿಸುವುದು ಆವಶ್ಯಕವಾಗಿದೆ.

## ಸಮಾರೋಪ

ಹಣಕಾಸಿನ ನವಪ್ರವರ್ತನೆಯು ಹಣಕಾಸಿನ ಸೇವೆಗಳ ಗ್ರಾಹಕರಿಗೆ ಸಂಶಯಾತೀತ ಫಲಗಳನ್ನು ತಂದುಕೊಟ್ಟಿದೆ. ಮಾರುಕಟ್ಟೆಗಳು ಬದಲಾಗುತ್ತಿರುವ ಪರಿಸ್ಥಿತಿಗಳಿಗೆ ಶೀಘ್ರವಾಗಿ ಹಾಗೂ ಸಮ್ಯವಾಗಿ ತಾವು ಹೊಂದಿಕೊಳ್ಳಬಲ್ಲುವೆಂದು ತೋರಿಸಿಕೊಟ್ಟಿವೆ. ಅವುಗಳು ಬಹುಶಃ ಇದೇ ರೀತಿ ಮುಂದುವರಿಯಬಹುದು. ಇಂದು ಬೆಳಗ್ಗೆ ನನ್ನ ಹೇಳಿಕೆಗಳನ್ನು ಈ ಬೆಳವಣಿಗೆಗಳ ಕೆಲವು ಪರಿಣಾಮಗಳ ಮೇಲೆ ಹಾಗೂ ಒಟ್ಟಾರೆ ಹಣಕಾಸು ವ್ಯವಸ್ಥೆಯ ನಷ್ಟ ಸಂಭಾವ್ಯತೆಗಳ ಹೆಚ್ಚಳದಿಂದ, ವೈಯಕ್ತಿಕ ಸಂಸ್ಥೆಗಳಿಗೆ ಆಗುವ ತ್ವರಿತ ಲಾಭಗಳ ಬಗ್ಗೆ ಖಾತರಿಪಡಿಸುವ ಆವಶ್ಯಕತೆಗಳು ಪರಿಹಾರವಾಗಲಾರವು ಎಂಬವುಗಳ ಮೇಲೆ ಕೇಂದ್ರೀಕರಿಸಿದ್ದೇನೆ. ಇದನ್ನು ಸಾಧಿಸುವಾಗ್ಯ. ನಷ್ಟ ಸಂಭಾವ್ಯತೆ

16ನೇ ಪುಟ ನೋಡಿ]

# ಉಪಕ್ರಮ ಬಂಡವಾಳ ಪ್ರಕ್ರಿಯೆ

**ವೈಜ್ಞಾನಿಕ ಪರಿಕಲ್ಪನೆಗಳನ್ನು ಮಾರಾಟಯೋಗ್ಯ ಉತ್ಪನ್ನವಾಗಿ ಪರಿವರ್ತಿಸುವ ಉಪಕ್ರಮ ಬಂಡವಾಳ ಪ್ರಕ್ರಿಯೆಯ ಪರಿಚಯ ಮತ್ತು ಸಮೀಕ್ಷೆ**


**ಕೆ. ಎನ್. ಮಹಾಬಲ**

ಅಧಿಕೃತ ಭಾಷೆಗಳ ವಿಭಾಗ
ಭಾರತೀಯ ಸ್ಟೇಟ್ ಬ್ಯಾಂಕ್
ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು ೧


ಪ್ರಯೋಗ ಶಾಲೆ — ಉದ್ಯಮ

| ಹೊಸ ವಿಚಾರ | ತಾಂತ್ರಿಕ ಸಾಧ್ಯತೆ | ←→ ಅಂತರ | ಉತ್ಪನ್ನದ ಅಭಿವೃದ್ಧಿ | ಮಾದರಿ ಯೋಜನೆ | ಉತ್ಪಾದನೆ | ಮಾರಾಟ |
|---|---|---|---|---|---|---|

ಆವಿಷ್ಕಾರ ಹಂತ — 2–5ವರುಷ — ಪರಿವರ್ತನಾ ಹಂತ

ಉಪಕ್ರಮ ಬಂಡವಾಳದ ಅವಧಿ

ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ನಾವು ಇಂದು ಹೊಸ ಹೊಸ ಪ್ರಕ್ರಿಯೆಗಳ ಉಗಮವನ್ನು ಕಾಣುತ್ತಿದ್ದೇವೆ. ಕೆಲವೇ ವರ್ಷಗಳ ಹಿಂದೆ ಅಪರಿಚಿತ ಪದಗಳಾಗಿದ್ದ ಗುತ್ತಿಗೆ ವ್ಯವಹಾರ (ಲೀಸಿಂಗ್) ಋಣಾಭಿಕರಣ (ಫ್ಯಾಕ್ಟರಿಂಗ್), ಪರಸ್ಪರ ನಿಧಿ ಮುಂತಾದುವು ಇಂದು ಬ್ಯಾಂಕಿಂಗ್ ವ್ಯವಸ್ಥೆಯ ಅವಿಭಾಜ್ಯ ಅಂಗಗಳಾಗಿವೆ. ಬದಲಾವಣೆಯ ಈ ಪರ್ವ ಮುಂದುವರಿಯುತ್ತಲೇ ಇದ್ದು, ಈಗ ಇದು ಮತ್ತೊಂದು ಹೊಸ ಕ್ಷೇತ್ರದತ್ತ ಕಣ್ಣು ಹಾಯಿಸಿದೆ. ಅದೇ ಉನ್ನತ ತಂತ್ರಜ್ಞಾನದ ಕ್ಷೇತ್ರ. ನಮ್ಮ ದೇಶದಲ್ಲಿ ಸಂಶೋಧನೆ ಹಾಗೂ ಅಭಿವೃದ್ಧಿ ಕಾರ್ಯಗಳಿಗೇನೂ ಕೊರತೆಯಿಲ್ಲ. ಹಲವಾರು ವರ್ಷಗಳ ಹಿಂದೆ ಕೇಂದ್ರ ವಿಜ್ಞಾನ ಹಾಗೂ ಕೈಗಾರಿಕಾ ಸಂಶೋಧನಾ ಮಂಡಳಿ (CSIR) ಸ್ಥಾಪಿಸಿದ ಅಸಂಖ್ಯಾತ ಸಂಶೋಧನೆಗಳು ಫಲ ನೀಡಿವೆ. ಇಂಥ ಸಂಶೋಧನೆಗಳಗೆ ವಾಣಿಜ್ಯಿಕ ಸ್ವರೂಪ ನೀಡಬೇಕಾಗಿದೆ. 'ಉಪಕ್ರಮ ಬಂಡವಾಳ ಪ್ರಕ್ರಿಯೆ' ಈ ನಿಟ್ಟಿನ ಪ್ರಮುಖ ಉಪಕರಣವಾಗಿದೆ.

## ಅರ್ಥ

ವೈಜ್ಞಾನಿಕ ಪರಿಕಲ್ಪನೆಗಳನ್ನು ಮಾರಾಟಯೋಗ್ಯ ಉತ್ಪನ್ನವಾಗಿ ಪರಿವರ್ತಿಸುವ ಕ್ರಿಯೆಯನ್ನು ಉಪಕ್ರಮ ಬಂಡವಾಳ ಪ್ರಕ್ರಿಯೆ ಎನ್ನಬಹುದು. ತಂತ್ರಜ್ಞಾನಾಧಾರಿತ ಉದ್ಯಮಗಳಿಗೆ ಉಪಕ್ರಮ ಬಂಡವಾಳಿಗ ಹಣಕಾಸು ನೆರವು ನೀಡುವುದೇ ಇದರ ಮುಖ್ಯ ಕ್ರಿಯೆ. ಇದರ ಕಾರ್ಯಾಚರಣೆಯನ್ನು ಹೀಗೆ ವಿವರಿಸಬಹುದು :

ಮೊಟ್ಟಮೊದಲಿಗೆ ಪ್ರಯೋಗಶಾಲೆಯಲ್ಲಿ ಹೊಸ ಉಪಜ್ಞೆಯೊಂದರ ಸಂಶೋಧನೆಯಾಗುತ್ತದೆ. ಅದು ತಾಂತ್ರಿಕವಾಗಿ ಸಾಧ್ಯವೆ ಎಂಬುದನ್ನು ಪರಿಶೀಲಿಸಿ ಉತ್ಪನ್ನವನ್ನು ಅಭಿವೃದ್ಧಿಪಡಿಸಲಾಗುತ್ತದೆ. ಈ ಹಂತದಲ್ಲಿ ಉಪಕ್ರಮ ಬಂಡವಾಳಿಗ ಉದ್ಯಮವನ್ನು ಪ್ರವೇಶಿಸುತ್ತಾನೆ. ಸಾಲ ಅಥವಾ ಬಂಡವಾಳದ ರೂಪದಲ್ಲಿ ತಂತ್ರಜ್ಞಾನ ವೆಚ್ಚಗಳನ್ನೆಲ್ಲ ಭರಿಸುತ್ತಾನೆ. ಸ್ವಯಂಶಕ್ತವಾಗಿ ನಿಲ್ಲುವವರೆಗೆ ಉದ್ಯಮದಲ್ಲಿದ್ದು, ಆದರೆ ಅದರ ವ್ಯವಸ್ಥಾಪನದಲ್ಲಿ ಭಾಗವಹಿಸದೆ, ಅನಂತರ ತನ್ನ ಷೇರುಗಳನ್ನು ವಾಪಸು ಪಡೆದು ಉದ್ಯಮದಿಂದ ನಿರ್ಗಮಿಸುತ್ತಾನೆ.

## ಮಹತ್ತ್ವ

ಸಂಶೋಧನೆ ಹಾಗೂ ಅಭಿವೃದ್ಧಿಯ ಫಲಗಳನ್ನು ಆಧರಿಸಿದ ಉದ್ಯಮ ಹಲವಾರು ಸವಾಲುಗಳನ್ನೂ ಅಡ್ಡಿ ಆತಂಕಗಳನ್ನೂ ಎದುರಿಸಬೇಕಾಗುತ್ತದೆ. ಅತಿ ದೀರ್ಘ ಆರಂಭಿಕ ಅವಧಿ ಹೊಂದಿರುವ, ಅವಸಾನದ ಅಪಾಯ ಹೊಂದಿರುವ ಪರಿಯೋಜನೆಗಳಿಗೆ ಹಣಕಾಸು ನೆರವು ನೀಡಲು ಬ್ಯಾಂಕುಗಳು ಅಷ್ಟಾಗಿ ಮುಂದೆ ಬರುವುದಿಲ್ಲ. ಉದ್ಯಮದ ಪ್ರವರ್ತಕರು ಮುಕ್ತ ಮಾರುಕಟ್ಟೆಯಲ್ಲಿ ಹಣ ಎತ್ತಲೂ ಸಾಧ್ಯವಿಲ್ಲ. ಹೊಸ ಉದ್ಯಮಗಳಲ್ಲಿ ಹಣ ತೊಡಗಿಸಲು ಜನ ಹಿಂಜರಿಯುವುದೇ ಹೆಚ್ಚು. ಇಂಥ ಪರಿಸ್ಥಿತಿಯಲ್ಲಿ ಸಂಶೋಧನೆ ಹಾಗೂ ಅಭಿವೃದ್ಧಿಯ ಫಲಗಳು ಯಶಸ್ವಿಯಾಗಬೇಕಾದರೆ ಯುಕ್ತವಾದ ಹಣಕಾಸು ಮೂಲವೊಂದು ಅನಿವಾರ್ಯ. ಹೀಗಾಗಿ ಉಪಕ್ರಮ ಬಂಡವಾಳದ ಪರಿಕಲ್ಪನೆ ಮಹತ್ತ್ವದ್ದೆನಿಸಿದೆ.

## ನೆರವಿನ ಸ್ವರೂಪ

1 ಶೈಶವಾವಸ್ಥೆಯಲ್ಲಿರುವ, ಅತಿ ಹೆಚ್ಚು ನಷ್ಟ ಸಂಭಾವ್ಯತೆಯುಳ್ಳ ಪರಿಯೋಜನೆಗಳಿಗೆ ನೆರವು ನೀಡಲಾಗುತ್ತದೆ.

2 ಇದು ದೀರ್ಘಾವಧಿ ಹಣಕಾಸು ಸಾಧನವಾಗಿದ್ದು, ಬಂಡವಾಳ ಗಳಿಕೆಯೇ ಇದರ ಕೇಂದ್ರ ಆಶಯವಾಗಿರುತ್ತದೆ.

3 ಸಾಮಾನ್ಯವಾಗಿ ಉಪಕ್ರಮ ಬಂಡವಾಳ ಸಾಮ್ಯ ಬಂಡವಾಳದ ರೂಪದಲ್ಲಿರುತ್ತದೆ. ಉದ್ಯಮ ಸ್ಥಿರವಾಗಿ ನಿಂತೊಡನೆ ಬಂಡವಾಳಿಗರು ಅದನ್ನು ಬಂಡವಾಳ ಗಳಿಕೆಯಾಗಿ (capital gain) ಪರಿವರ್ತಿಸುತ್ತಾರೆ.

4 ಉಪಕ್ರಮ ಬಂಡವಾಳಿಗರು ಉದ್ಯಮದ ಸಾಂಸ್ಥಿಕ ಯಶಸ್ಸಿಗಾಗಿ ದುಡಿಯುತ್ತ ಹಣಕಾಸಿನ ಹಾಗೂ ವ್ಯವಸ್ಥಾಪನದ ಬೆಂಬಲ ನೀಡುವರು.

5 ಉಪಕ್ರಮ ಬಂಡವಾಳಿಗರು ಉದ್ಯಮ ಸುಸ್ಥಾಪಿತವಾದ ಮೇಲೆ ತಮ್ಮ ಪಾಲಿನ ಬಂಡವಾಳ ಷೇರುಗಳನ್ನು ಮುಕ್ತ ಮಾರುಕಟ್ಟೆಯಲ್ಲಿ ವಿಲೆ ಮಾಡುವ ಮೂಲಕ ಉದ್ಯಮದಿಂದ ನಿರ್ಗಮಿಸುವ ಅವಕಾಶವೂ ಲಭ್ಯವಿದೆ. ಇದರಿಂದ ಅವರಿಗೆ ಬಂಡವಾಳ ಗಳಿಕೆಯ ಸಾಧ್ಯತೆ ಮತ್ತು ನಿಧಿಗಳ ಪುನರ್ವಿನಿಯೋಜನದ ಅವಕಾಶ ಎಂದೂ ಲಭ್ಯವಾಗುತ್ತದೆ.

ಉಪಕ್ರಮ ಬಂಡವಾಳಿಗ ಷೇರು ರೂಪದಲ್ಲಿ ನೆರವು ನೀಡದೆ ಸಾಲ ನೆರವು ರೂಪದಲ್ಲಿ ನೀಡಿದ್ದರೆ, ಸುಲಭ ಷರತ್ತುಗಳ ಮೇಲೆ ಅದನ್ನು ಷೇರುಗಳನ್ನಾಗಿ ಪರಿವರ್ತಿಸಲು ಅವಕಾಶವಿದೆ.

## ಸರ್ಕಾರಿ ನೀತಿ

ಉಪಕ್ರಮ ಬಂಡವಾಳದ ಪರಿಕಲ್ಪನೆ ನಮ್ಮ ದೇಶದಲ್ಲಿ ಬೇರೂರುತ್ತಿರುವ ಸಮಯದಲ್ಲೇ ಇದನ್ನು ಕುರಿತಂತೆ ಸರ್ಕಾರಿ ನೀತಿಯೂ ಪ್ರಕಟವಾಗಿದೆ. 1988ರ ನವೆಂಬರ್ 25ರಂದು ಪ್ರಕಟವಾದ ಈ ನೀತಿಯ ಕೆಲವು ಮುಖ್ಯಾಂಶಗಳನ್ನು ಮುಂದೆ ಕೊಡಲಾಗಿದೆ :

ಅರ್ಹತೆ : ಅಖಿಲ ಭಾರತ ಹಣಕಾಸು ಸಂಸ್ಥೆಗಳೂ ವಿದೇಶಿ ಬ್ಯಾಂಕುಗಳೂ ಸೇರಿದಂತೆ ಅನುಸೂಚಿತ ವಾಣಿಜ್ಯ ಬ್ಯಾಂಕುಗಳು ಮತ್ತು ಬ್ಯಾಂಕ್‌ನ ಸಹಾಯಕ ಸಂಸ್ಥೆಗಳು ಉಪಕ್ರಮ ಬಂಡವಾಳ

ನಿಧಿ ಸ್ಥಾಪಿಸಬಹುದು. ಜಂಟಿ ಉದ್ಯಮವಾದಲ್ಲಿ ಒಬ್ಬ ವ್ಯಕ್ತಿ ಶೇ. 20ಕ್ಕಿಂತ ಹೆಚ್ಚು ಷೇರು ಹೊಂದಿರಬಾರದು.

2 ಉಪಕ್ರಮ ಬಂಡವಾಳ ವೃತ್ತಿಪರ ವ್ಯವಸ್ಥಾಪನವನ್ನು ಹೊಂದಿರಬೇಕು.

3 ಅಧಿಕ ನಷ್ಟಸಂಭಾವ್ಯತೆ ಹೊಂದಿರುವ ಉನ್ನತ ತಂತ್ರಜ್ಞಾನದಿಂದ ಕೂಡಿದ ಹೊಚ್ಚಹೊಸದಾದ, ಅಥವಾ ಈಗಾಗಲೇ ಆರಂಭವಾಗಿದ್ದರೂ ಪ್ರಮುಖ ಸುಧಾರಣೆಗಳನ್ನು ಅಳವಡಿಸುವ ಉದ್ದೇಶವಿರುವ, ಉದ್ಯಮಗಳಿಗೆ ನೆರವು ಲಭ್ಯವಾಗಬೇಕು.

4 ಅಸ್ವಸ್ಥ ಘಟಕಗಳ ಪುನರುಜ್ಜೀವನಕ್ಕೆ ನೀಡುವ ನೆರವನ್ನೂ ಉಪಕ್ರಮ ಬಂಡವಾಳ ನೆರವು ಎಂದೇ ಪರಿಗಣಿಸಲಾಗುವುದು.

5 ಉದ್ಯಮವನ್ನು ನಿಯಮಿತ ಕಂಪನಿಯೆಂದು ಸ್ಥಾಪಿಸಬೇಕು. ವೃತ್ತಿಪರ ಕೌಶಲ ಹೊಂದಿರುವ ವ್ಯಕ್ತಿಗಳಿಂದ ಲೆಕ್ಕ ನಿರ್ವಹಣೆಯಾಗಬೇಕು.

6 ನಿಧಿಯ ಕನಿಷ್ಠ ಶೇ 60ರಷ್ಟು ಬಂಡವಾಳವನ್ನು ಉಪಕ್ರಮ ಬಂಡವಾಳ ಚಟುವಟಿಕೆಗಳಿಗೇ ವಿನಿಯೋಗಿಸಬೇಕು. ನೆರವಿನ ಕನಿಷ್ಠ ಪ್ರಮಾಣ ರೂ. 10 ಕೋಟಿ. ಆದರಲ್ಲಿ ಪ್ರವರ್ತಕರ ಪಾಲು ಶೇ. 40 ಮತ್ತು ಋಣ : ಬಂಡವಾಳ ಅನುಪಾತ 1 : 1.15 ಇರುವುದು ಅಗತ್ಯ.

8 ಸಾರ್ವಜನಿಕ ಬಂಡವಾಳ ನೀಡಿಕೆಗೆ/ಖಾಸಗಿ ವಿನಿಯೋಜನೆಗೆ ಅವಕಾಶವಿದೆ. ಷೇರು ಮಾರುಕಟ್ಟೆಯ ಕಾರ್ಯವಿಧಾನದಂತೆ ಸೂಚಿತವಾಗಿರಬೇಕು. ಪ್ರವರ್ತಕರು ಇಚ್ಛಿಸಿದಲ್ಲಿ ಅಭಿಗೋಪನಕ್ಕೂ (underwriting) ಅವಕಾಶವಿದೆ. ಅನಿವಾಸಿಗಳಿಗೆ ಅಥವಾ ವಿದೇಶಿ ವಿನಿಯೋಜಕರಿಗೆ ಷೇರು ನೀಡಬೇಕಾದಲ್ಲಿ ರಿಸರ್ವ್ ಬ್ಯಾಂಕ್ ಅನುಮತಿ ಅಗತ್ಯ.

9 ಅಂತರರಾಷ್ಟ್ರೀಯ ಸಂಸ್ಥೆಗಳಿಗೆ ತಟಸ್ಥ ವ್ಯವಸ್ಥಾಪನದ ಷರತ್ತಿನ ಮೇಲೆ ಶೇ 25 ಮೀರದಂತೆ ಮಧ್ಯಮಾವಧಿ, ದೀರ್ಘಾವಧಿ ಯೋಜನೆಗೆ ಅವಕಾಶ ನೀಡಲಾಗುವುದು.

10 ಅನಿವಾಸಿಗಳಿಗೆ ಮರು ರವಾನೆ (Repatriation) ಸೌಲಭ್ಯವಿದ್ದರೆ ಶೇ. 25ರಿಂದ 40 ಪ್ರತಿಫಲದ ಮೇಲೆ ಷೇರು ನೀಡಬಹುದು.

11 ಉಪಕ್ರಮ ಬಂಡವಾಳಿಗರ ನಿರ್ಗಮನ (Exit)—ಅಂದರೆ ಉದ್ಯಮ ಸ್ಥಿರವಾಗಿ ನಿಂತ ಮೇಲೆ ಬಂಡವಾಳ ವಾಪಸು ಮಾಡುವ ಕ್ರಿಯೆಯನ್ನು ವಾಸ್ತವಿಕ ಆಧಾರದ ಮೇಲೆ (ಉದಾ : ಪುಸ್ತಕ ಮೌಲ್ಯ ಲಾಭಗಳಿಕೆ ಸಾಮರ್ಥ್ಯ ಮುಂತಾದವನ್ನು ಪರಿಗಣಿಸಿ) ಮಾಡಬಹುದು.

12 ಉಪಕ್ರಮ ಬಂಡವಾಳ ನಿಧಿಗೆ ಅರ್ಹತೆಯ ಆಧಾರದ ಮೇಲೆ ಹಾಗೂ ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್, ಭಾರತದ ಕೈಗಾರಿಕಾ ಉದರಿ ಮತ್ತು ವಿನಿಯೋಜನ ನಿಗಮದ ಶಿಫಾರಸು ಮೇಲೆ ಪ್ರಾಶಸ್ತ್ಯದ ತೆರಿಗೆ ವಿಧಾನ ಲಭ್ಯವಿದೆ.

## ಇತರ ದೇಶಗಳಲ್ಲಿ

ಅಮೆರಿಕ : ಅಮೆರಿಕದ ಯುದ್ಧಾನಂತರದ ಅರ್ಥವ್ಯವಸ್ಥೆಯ ಪುನರುಜ್ಜೀವನದಲ್ಲಿ ಉಪಕ್ರಮ ಬಂಡವಾಳ ವಹಿಸಿರುವ ಪಾತ್ರ ಮಹತ್ತರವಾದದ್ದು. 1946ರಲ್ಲೇ ಅದು ಬಳಕೆಗೆ ಬಂತು. ಆ್ಯಪಲ್ ಕಂಪ್ಯೂಟರ್, ಕ್ಯಾಲಿಫೋರ್ನಿಯಾದ ಸಿಲಿಕಾನ್‌ವ್ಯಾಲಿ, ಬಾಸ್ಟನ್‌ನ ರೂಟ್ 128 ಯಶಸ್ವಿ ಸಂಸ್ಥೆಗಳು.

1986ರಲ್ಲಿ 2,500 ಕೋಟಿ ಡಾಲರ್‌ಗಳ ಉಪಕ್ರಮ ಬಂಡವಾಳ ಸಂಚಿತವಾಗಿತ್ತು. ಹೊಂದಾಣಿಕೆ ಗುಣದ ಹಣಕಾಸು ಮಾರುಕಟ್ಟೆ ಹಾಗೂ ಚೈತನ್ಯಪೂರ್ಣ ಸರ್ಕಾರಿ ನೀತಿಗಳಿಂದ ಇಂಥ ಯಶಸ್ಸು ಅಲ್ಲಿ ಸಾಧ್ಯವಾಗಿದೆ.

ಯೂರೋಪ್ ದೇಶಗಳು : ಬ್ರಿಟನ್ನಿನ (ಯು.ಕೆ) ಮುಂದಾಳುತನದಲ್ಲಿ ಎಪ್ಪತ್ತರ ದಶಕದ ಆರಂಭದಲ್ಲಿ ಉಪಕ್ರಮ ಬಂಡವಾಳದ ಪರಿಕಲ್ಪನೆಗೆ ಉತ್ತೇಜನ ದೊರಕಿತ್ತು. 1985ರ ಕೊನೆಯ ಹೊತ್ತಿಗೆ ನಿಧಿ ಅಮೆರಿಕದ ಸಾಧನೆಯ ¼ರಷ್ಟು ಮಾತ್ರ.

ಜಪಾನ್ : ಅಮೆರಿಕದ ಯಶಸ್ಸಿನಿಂದ ಉತ್ತೇಜನಗೊಂಡು 1979ರಲ್ಲಿ ಜಪಾನೀಯರು ಉಪಕ್ರಮ ಬಂಡವಾಳ ಪರಿಕಲ್ಪನೆಯನ್ನು ಬರಮಾಡಿಕೊಂಡರು. ಇದು ಜಪಾನೀ ಸಂಪ್ರದಾಯಕ್ಕೆ ಅನುಗುಣವಾಗದ್ದರಿಂದ ಆರಂಭದ ಯತ್ನಗಳು ಫಲ ಕೊಡಲಿಲ್ಲ. 1989ರಲ್ಲಿ ಕಂಡುಬಂದ ಉನ್ನತ ತಂತ್ರಜ್ಞಾನದ ಉತ್ಕರ್ಷದ ಕಾಲದಲ್ಲಿ ಅದು ಪುನರ್ಜನ್ಮ ಪಡೆದು ಬದಲಾದ ಪರಿಸರ, ಸರ್ಕಾರಿ ನೀತಿ ಹಾಗೂ ಆವಶ್ಯಕತೆಗಳ ಕಾರಣವಾಗಿ ಈ ಪರಿಕಲ್ಪನೆ ಜಪಾನಿನಲ್ಲಿ ಭದ್ರವಾಗಿ ನೆಲೆಯೂರಿತು. 1984ರ ವರೆಗೆ ಈ ಉದ್ದೇಶಕ್ಕಾಗಿ ವಿನಿಯೋಗಿಸಲಾದ ನಿಧಿಯ ಮೊತ್ತ 340 ಕೋಟಿ ಅಮೆರಿಕನ್ ಡಾಲರ್‌ಗಳು.

ಭಾರತ ಸರ್ಕಾರ ಹಾಗೂ ಅಮೆರಿಕ ನೆರವು ನಿಧಿಗಳ ನಡುವೆ 1985ರಲ್ಲಿ ಆದ ಒಪ್ಪಂದದ ಫಲವಾಗಿ ರೂಪುಗೊಂಡ ಭಾರತೀಯ ಕೈಗಾರಿಕಾ ಉದರಿ ಮತ್ತು ವಿನಿಯೋಜನ ನಿಗಮದ ವಾಣಿಜ್ಯ ತಂತ್ರಜ್ಞಾನ ಅಭಿವೃದ್ಧಿ ಕಾರ್ಯಕ್ರಮ ಜಾರಿಗೆ ಬಂತು. ಭಾರತ–ಅಮೆರಿಕಗಳ ಸಂಶೋಧನೆ ಹಾಗೂ ಅಭಿವೃದ್ಧಿಯ ಜಂಟಿ ಉಪಕ್ರಮಗಳನ್ನು ಪ್ರವರ್ತಿಸಿ ಧನಪೋಷಣೆ ನೀಡುವುದೇ ಇದರ ಉದ್ದೇಶ. ಆಡಳಿತ ಹಾಗೂ ವ್ಯವಸ್ಥಾಪನದ ಹೊಣೆಯನ್ನು ಭಾರತೀಯ ಕೈಗಾರಿಕಾ ಉದರಿ ಮತ್ತು ವಿನಿಯೋಜನ ನಿಗಮ ಹೊತ್ತಿದೆ. ಈ ಕಾರ್ಯಕ್ರಮ ಉಪಕ್ರಮ ಬಂಡವಾಳದ ಲಕ್ಷಣಗಳನ್ನು ಸಾಮಾನ್ಯವಾಗಿ ಹೊಂದಿದೆ. ಪರಿಯೋಜನೆಯ ವೆಚ್ಚ 100 ಕೋಟಿ ಅಮೆರಿಕನ್ ಡಾಲರ್ ಮಿತಿಯೊಳಗೆ ಇರಬೇಕು. ಶೇ 50ರ ವರೆಗೆ ನೆರವು ನೀಡುತ್ತದೆ. ಭಾರತ–ಅಮೆರಿಕ ಜಂಟಿ ಉಪಕ್ರಮಗಳಿಗೆ ಮಾತ್ರ ಈ ಕಾರ್ಯಕ್ರಮದ ಅಡಿಯಲ್ಲಿ ನೆರವು ಲಭ್ಯವಿದೆ.

ಭಾರತೀಯ ತಂತ್ರಜ್ಞಾನ ಅಭಿವೃದ್ಧಿ ಮತ್ತು ಮಾಹಿತಿ ಕಂಪನಿ ನಿಯಮಿತ (Technology Development and Information Company of India Ltd., ಟಿಡಿಐಸಿಐ) ಇದು ಐ.ಸಿ.ಐ.ಸಿಐ ಮತ್ತು ಭಾರತೀಯ ಯೂನಿಟ್ ಟ್ರಸ್ಟ್‌ನ (ಯುಟಿಐ) ಜಂಟಿ ಉದ್ಯಮ. ಇದರ ಕೇಂದ್ರ ಕಛೇರಿ ಬೆಂಗಳೂರಿನಲ್ಲಿದೆ. ತಂತ್ರಜ್ಞಾನ ಅಭಿವೃದ್ಧಿ ಇದರ ಮುಖ್ಯ ಕಾರ್ಯೋದ್ದೇಶ. ರೂ 1 ಕೋಟಿ ಪಾವತಿಯಾದ ಬಂಡವಾಳ ಹೊಂದಿದೆ. ಟಿಡಿಐಸಿಐನ ಮೊದಲ ಉಪಕ್ರಮ ಬಂಡವಾಳ ನಿಧಿ ರೂ 20 ಕೋಟಿ ಇದ್ದು, ಇದರಲ್ಲಿ ಐಸಿಐಸಿಐ ಹಾಗೂ ಯುಟಿಐ ಸಮಸಮವಾಗಿ ವಿನಿಯೋಜಿಸಿವೆ. ಇದುವರೆಗೆ 32 ಪರಿಯೋಜನೆಗಳಿಗೆ ರೂ 13.98 ಕೋಟಿಯನ್ನು ಮಂಜೂರು ಮಾಡಿರುವುದೇ ಅಲ್ಲದೆ ರೂ. 5.37 ಕೋಟಿಯನ್ನು ಈಗಾಗಲೇ ವಿತರಿಸಲಾಗಿವೆ. ಟಿಡಿಐಸಿಐ ಈ ನಡುವೆ ರೂ 30 ಕೋಟಿಯ ಮತ್ತೊಂದು ಯೋಜನೆಯನ್ನು ಆರಂಭಿಸಲಿದೆ.

ಆರ್‌ಸಿಟಿಸಿ : ಕೈಗಾರಿಕಾ ಹಣಕಾಸು ನಿಗಮ ಇದುವರೆಗೆ ತಂತ್ರಜ್ಞಾನಾಧಾರಿತ ಉದ್ಯಮಗಳಿಗೆ

# ಅಂತರರಾಷ್ಟ್ರೀಯ ಬ್ಯಾಂಕಿಂಗಿನಲ್ಲಿ ನವಪ್ರವರ್ತನ

[14ನೇ ಪುಟದಿಂದ ಮುಂದುವರಿದುದು]

ಗಳು ಸಾಕಷ್ಟು ನಿರ್ಧರಿಸಲ್ಪಟ್ಟು ಮತ್ತು ನಿಯಂತ್ರಿಸಲ್ಪಟ್ಟು ಮತ್ತು ಸೂಕ್ತವಾಗಿ ಬೆಲೆಕಟ್ಟಲ್ಪಟ್ಟಿವೆಯೇ ಎಂದು ಖಾತರಿಗೊಳಿಸಿಕೊಳ್ಳಲು ನಿರಂತರ ಜಾಗೃತಿ ಬೇಕಾಗುತ್ತದೆ.

ಈ ನವಪ್ರವರ್ತನಗಳನ್ನು ಪೋಷಿಸಿದ ತಾಂತ್ರಿಕತೆಯು ಇವುಗಳ ನಿಯಂತ್ರಣದಲ್ಲಿ ಸಹಾಯ ಮಾಡಲು ದೊರಕುತ್ತದೆ. ಏಕೆಂದರೆ ಸಮರ್ಥ ಮಾರುಕಟ್ಟೆಗಳು ಕೇವಲ ಅಪಾರ್ಥಕ್ಕೆಡೆಮಾಡುವ ನಿಯಂತ್ರಣಗಳ ಗೈರುಹಾಜರಿ ಮಾತ್ರವಲ್ಲದೆ ಸಂಪನ್ಮೂಲಗಳನ್ನು ವಿತರಿಸುವ ಬಗ್ಗೆ ಮತ್ತು ತೀರ್ಮಾನಗಳ ಆಧಾರವಾಗಬಲ್ಲ ಒಳ್ಳೆ ಮಾಹಿತಿಗಳೂ ಬೇಕಾಗುತ್ತವೆ. ಈ ಯೋಚನೆಗಳನ್ನು ಈ ಅಧಿವೇಶನದ ಮುಂದಿನ ಒಂದೂವರೆ ದಿವಸಗಳಲ್ಲಿ ಚಿಂತನೆ ಮಾಡಲು ನಾನು ನಿಮಗಾಗಿ ಬಿಡಲಿಚ್ಛಿಸುತ್ತೇನೆ.

●

ನಷ್ಟಭಯ ಬಂಡವಾಳವನ್ನು (Risk capital) ಆರ್‌ಸಿಎಫ್ ಮೂಲಕ ಒದಗಿಸುತ್ತಿತ್ತು. ಈಗ ರಿಸ್ಕ್ ಕ್ಯಾಪಿಟಲ್ ಅಂಡ್ ಟೆಕ್ನಾಲಜಿ ಫೈನಾನ್ಸ್ ಕಾರ್ಪೊರೇಷನ್—ಆರ್‌ಸಿಟಿಸಿ) ಆರಂಭಿಸಲಾಗಿದೆ. ಇದು ಆರ್‌ಸಿಎಫ್‌ನ ಪಾತ್ರವನ್ನು ವಹಿಸಿಕೊಂಡಿದೆ. ಆರ್‌ಸಿಟಿಸಿಯ ಬಂಡವಾಳ ರೂ. 1.5 ಕೋಟಿ ಇದು ಪ್ರಸಕ್ತ ರೂ 1.5 ಕೋಟಿಯ ಉಪಕ್ರಮ ಬಂಡವಾಳ ಮಂಜೂರು ಮಾಡಿದೆ.

**ಸಿವಿಎಫ್ :** ಭಾರತೀಯ ಉದರಿ ಉಪಕ್ರಮ ನಿಧಿ ನಿಯಮಿತ (ಕ್ರೆಡಿಟ್ ವೆಂಚರ್ ಫಂಡ್ ಇಂಡಿಯಾ ಲಿ.) ಖಾಸಗಿ ವಲಯದ ಪ್ರಪ್ರಥಮ ಉಪಕ್ರಮ ಬಂಡವಾಳ ಸಂಸ್ಥೆ. ಇದು 1988ರಲ್ಲಿ ಆರಂಭಗೊಂಡು 1989ರಲ್ಲಿ ಕಾರ್ಯಾಚರಣೆ ಆರಂಭಿಸಿತು. ಇದು ರೂ 10 ಕೋಟಿಯ ಸಾಮ್ಯ ಬಂಡವಾಳ ಹೊಂದಿದೆ. ಶೇ 20 ರಷ್ಟು ಸಿ.ವಿ.ಸಿ ಶೇ 25 ಎಡಿಬಿ ಮತ್ತು ಸಿಪಿಸಿ (ಯು.ಕೆ.) ಮತ್ತು ಉಳಿದುದ್ದನ್ನು ಹಣಕಾಸು ಸಂಸ್ಥೆ, ಬ್ಯಾಂಕುಗಳು ಹಾಗೂ ಖಾಸಗಿ ವಿನಿಯೋಜಕರಿಂದ ಸಂಗ್ರಹಿಸಲಾಗಿದೆ. ಬ್ರಿಟನ್ನಿನ ಬೃಹತ್ ಉಪಕ್ರಮ ಬಂಡವಾಳ ಕಂಪನಿಯೊಂದರೊಡನೆ ತಾಂತ್ರಿಕ ಸಹಯೋಗವನ್ನೂ ಸಿವಿಎಫ್ ಹೊಂದಿದೆ.

**ಐಡಿಬಿಐ :** ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ (ಐಡಿಬಿಐ—Industrial Development Bank of India)ಉನ್ನತ ತಂತ್ರಜ್ಞಾನದ ಸಣ್ಣ ಹಾಗೂ ಮಧ್ಯಮ ಗಾತ್ರದ ಪರಿಯೋಜನೆಗಳಿಗೆ ಉಪಕ್ರಮ ಬಂಡವಾಳ ನಿಧಿಯೊಂದನ್ನು ಹೊಂದಿದೆ. ಸಂಶೋಧನೆ ಹಾಗೂ ಅಭಿವೃದ್ಧಿ ಅಧಿಭಾರ ಅಧಿನಿಯಮದ ಅಡಿಯಲ್ಲಿ ಆಮದಾದ ತಂತ್ರಜ್ಞಾನದ ಮೇಲೆ ವಿಧಿಸಲಾಗುವ ಕರಭಾರವೇ ಐಡಿಬಿಐನ ಉಪಕ್ರಮ ಬಂಡವಾಳದ ಸಂಪನ್ಮೂಲ. ಈ ಯೋಜನೆಯಡಿ ಐಡಿಬಿಐ ಸಾಮಾನ್ಯವಾಗಿ ಷರತ್ತುಪೂರ್ವಕ ಸಾಲ ನೀಡುತ್ತದೆ. ಕಂಪನಿ ವಾಣಿಜ್ಯಕವಾಗಿ ಯಶಸ್ವಿಯಾದ ಮೇಲೆ ಉತ್ಪನ್ನದ ಮಾರಾಟದ ಮೇಲೆ ರಾಯಧನ ಪಡೆಯಲಿದೆ.

## ಬ್ಯಾಂಕು ಹಾಗೂ ಇತರ ಸಹಾಯಕ ಸಂಸ್ಥೆಗಳು

**ಎಸ್.ಬಿ.ಐ ಕ್ಯಾಪ್ :** ಉಪಕ್ರಮ ಬಂಡವಾಳ ನಿಧಿ ಸ್ಥಾಪಿಸಲು ಯೋಚಿಸಿದ್ದು ಸರ್ಕಾರದ ಅನುಮತಿ ಕಾಯುತ್ತಿದೆ. ಕ್ಯಾನ್‌ಫಿನಾ, ಪಿಎನ್‌ಬಿ ಕ್ಯಾಪ್, ಐಓಬಿ ಫಿಸ್ಕಲ್, ಬಿಓಐ ಫೈನಾನ್ಸ್, ಇಂಡ್ ಬ್ಯಾಂಕ್ ಸರ್ವಿಸಸ್ ಮತ್ತು ಇತರ ಹಲವು ಬ್ಯಾಂಕುಗಳು ಉಪಕ್ರಮ ಬಂಡವಾಳ ನಿಧಿ ರೂಪಿಸುವಲ್ಲಿ ಕಾರ್ಯನಿರತವಾಗಿವೆ. ರಾಜ್ಯಮಟ್ಟದ ಎರಡು ಅಭಿವೃದ್ಧಿ ಅಭಿಕರಣಗಳಾದ ಎಐಐಡಿಸಿ, ಹಾಗೂ ಜಿಐಡಿಸಿ ತಮ್ಮವೇ ಆದ ಉಪಕ್ರಮ ಬಂಡವಾಳ ಸ್ಥಾಪಿಸುವ ಸಂಭವವಿದೆ.

ಹೀಗೆ ತಂತ್ರಜ್ಞಾನದ ಕನಸುಗಳಿಗೆ ವಾಣಿಜ್ಯಕ ಸಾಕಾರ ನೀಡುವ ಪ್ರಕ್ರಿಯೆಯೆಂದು ಉಪಕ್ರಮ ಬಂಡವಾಳ ಜನಪ್ರಿಯವಾಗಿ ಹಲವಾರು ಸಂಸ್ಥೆಗಳು ಈ ದಿಸೆಯಲ್ಲಿ ಪ್ರವೃತ್ತವಾಗಿದೆ. ಆದರೂ ಇನ್ನೂ ಪ್ರವರ್ಧಮಾನಕ್ಕೆ ಬರುತ್ತಿರುವ ಹಂತದಲ್ಲೇ ತಲೆದೋರುತ್ತಿರುವ ಈ ಹಲವು ಎಡರು ತೊಡರುಗಳನ್ನು ನಿವಾರಿಸಿಕೊಳ್ಳುವುದು ಅತ್ಯಗತ್ಯವಾಗಿದೆ :

1 ಉಪಕ್ರಮ ಬಂಡವಾಳಿಗ ತಂತ್ರಜ್ಞಾನ, ನವೋನ್ಮೇಷ ಆಧಾರಿತ ಉದ್ಯಮಗಳಿಗೆ ಹಣಕಾಸು ಬಂಡವಾಳದ ನೆರವನ್ನು ಮಾತ್ರ ನೀಡಿ ಉದ್ಯಮದ ವ್ಯವಸ್ಥಾಪನದಿಂದ ದೂರವಿರುವುದು ಯೋಜನೆಯ ಯಶಸ್ಸಿಗೆ ಅತ್ಯಗತ್ಯವಾದುದು. ಆದರೆ ಇತ್ತೀಚಿನ ಪ್ರವೃತ್ತಿಗಳನ್ನು ಗಮನಿಸಿದಲ್ಲಿ ಬಂಡವಾಳ ಹೂಡುವವರಲ್ಲಿ 'ಸಹನಾ' ಪ್ರವೃತ್ತಿ ಇಲ್ಲದಿರುವುದು ಕಂಡುಬರುತ್ತದೆ. ದುಡ್ಡು ಹಾಕುವವನೇ ದೊಡ್ಡಣ್ಣ ಎಂಬ ಪ್ರವೃತ್ತಿ ಮೇಲುಗೈ ಪಡೆದು ಉಪಕ್ರಮ ಬಂಡವಾಳದ ಮೂಲ ಆಶಯವಾದ ನಿರ್ಬಂಧರಹಿತ ಉದ್ಯಮಪ್ರವರ್ತನ ಕ್ರಿಯೆಗೆ ಪೆಟ್ಟಾಗುತ್ತದೆ.

2 ಇದಕ್ಕೆ ಪೂರಕವಾಗಿಯೇ ಎಂಬಂತೆ ಉದ್ಯಮದ ಷೇರುಗಳನ್ನು ಷೇರು ಮಾರುಕಟ್ಟೆಯಲ್ಲಿ ಸೂಚಿತ (list) ಗೊಳಿಸುವ ಆರಂಭಿಕ ಅವಧಿಯಲ್ಲೇ ಬಡ್ಡಿ, ಡಿವಿಡೆಂಡ್, ರಾಯಧನ ಮುಂತಾದುವನ್ನು ಪಡೆಯುವ ಆತುರ ಪ್ರವೃತ್ತಿಯೂ ಹೆಚ್ಚುತ್ತಿದೆ. ಉಪಕ್ರಮ ಬಂಡವಾಳದ ತವರೂರಾದ ಅಮೆರಿಕಾದಲ್ಲಿರುವಂಥ ಸಹನಾಶೀಲ ಬಂಡವಾಳ ಪ್ರವೃತ್ತಿ (ಮೊದಲ ಐದು ವರ್ಷ ಡಿವಿಡೆಂಡ್ ಮುಂತಾದುವನ್ನು ಪಡೆಯದಿರುವುದು. ಬೆಳೆಯಬೇಕಾಗಿದೆ.

3 ಉದ್ಯಮವನ್ನು ಸ್ಥಾಪಿಸುವ ತಂತ್ರಜ್ಞಾನಿಗಳು ಉಪಕ್ರಮ ಬಂಡವಾಳಿಗನ ಹಿತವನ್ನು ಗಮನಿಸಿ ಅದನ್ನು ಕಾಯ್ದುಕೊಳ್ಳುವುದು ಅಗತ್ಯ. ಉದ್ಯಮವನ್ನು ಕೇವಲ ಪ್ರಯೋಗ ಸಂಶೋಧನೆಗಳ ಮುಂದುವರಿಕೆಯಾಗಿ ಮಾತ್ರ ಕಾಣದೆ ವಾಣಿಜ್ಯಕ ಉತ್ಪಾದನೆಗೆ ಪರಿವರ್ತಿಸುವ ಕ್ರಿಯೆ ಎಂಬುದನ್ನು ಮನಗಾಣಬೇಕಾಗಿದೆ. ಇಂಥ ಉದ್ದೇಶ ವಿಮುಖತೆಯಿಂದ ಉಪಕ್ರಮ ಬಂಡವಾಳಿಗರು ತೀವ್ರ ನಷ್ಟ ಅನುಭವಿಸುವಂತಾಗಿ ಮೂಲ ಆಶಯವೇ ಕುಸಿಯಬಹುದು.

4 ಸರ್ಕಾರ ಪ್ರಸ್ತುತ ಉಪಕ್ರಮ ಬಂಡವಾಳ ಕಲಾಪವನ್ನು ಉತ್ತೇಜಿಸುವ ಕಾರ್ಯಕ್ರಮವನ್ನು ಹಾಕಿಕೊಂಡಿದ್ದರೂ, ವ್ಯವಸ್ಥೆ ಬೇರೂರಿ ಲಾಭತರುವಂತಾದಾಗ ನಿಯಂತ್ರಣ ತೆರಿಗೆ ನೀತಿಗಳ ಕಟ್ಟುಪಾಡು ವಿಧಿಸುವ ಸಂಭವವೂ ಇದೆ. (ಗುತ್ತಿಗೆ ಕಾರ್ಯಾಚರಣೆಯ ವಿಷಯದಲ್ಲೂ ಇದೇ ರೀತಿ ಆಗಿದೆ.) ಆದ್ದರಿಂದ ಅಮೆರಿಕದಂತಹ ಮುಕ್ತ ಅರ್ಥವ್ಯವಸ್ಥೆಯಲ್ಲಿ ಕಂಡಿರುವ ಯಶಸ್ಸನ್ನು ನಮ್ಮಲ್ಲೂ ಕಾಣಲು ಸಾಧ್ಯವೇ ಎನ್ನುವುದೂ ಪ್ರಶ್ನೆ. ಇವೆಲ್ಲದರ ನಡುವೆಯೂ ಸಿಎಸ್‌ಐಆರ್ ಪ್ರಯೋಗಶಾಲೆಗಳು ವಿಫಲವಾದ ಸಂದರ್ಭದಲ್ಲಿ ಉಪಕ್ರಮ ಬಂಡವಾಳ ವ್ಯವಸ್ಥೆ ಗೆದ್ದಿದೆ. ಸುಮಾರು 30 ಲಕ್ಷ ವಿಜ್ಞಾನ/ತಂತ್ರಜ್ಞಾನ ಮಾನವಶಕ್ತಿ ಹೊಂದಿರುವ ಭಾರತದಂತಹ ದೇಶದಲ್ಲಿ ವಿಜ್ಞಾನ/ತಂತ್ರಜ್ಞಾನಕ್ಕೆ ವಾಣಿಜ್ಯ ರೂಪ ನೀಡಿಕೆ, ಅಸ್ವಸ್ಥ ಘಟಕಗಳ ಪುನರುಜ್ಜೀವನ ಮುಂತಾದ ಕ್ಷೇತ್ರಗಳಲ್ಲಿ ಉಪಕ್ರಮ ಬಂಡವಾಳ ಭರವಸೆಯನ್ನು ಬಿತ್ತಿದೆ ಉನ್ನತ ವಿದ್ಯೆ ಪಡೆದವರ ಪ್ರತಿಭಾ ಪಲಾಯನದ ಪ್ರವೃತ್ತಿಗೂ ತಡೆಯಾಗಲಿದೆ.

ಉಪಕ್ರಮ ಬಂಡವಾಳ ವ್ಯವಸ್ಥೆ ಭಾರತದಂತಹ ಸಂಕೀರ್ಣ ದೇಶದಲ್ಲಿ ಯಶಸ್ವಿಯಾಗುವುದೆ ಎನ್ನುವವರಿದ್ದಾರೆ. ಸಮಸ್ಯೆಗಳನ್ನು ಪ್ರಸ್ತಾಪಿಸುವವರಿದ್ದಾರೆ. ಆದರೆ ಈ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನಗಳಂತೂ ಮುಂದುವರಿಯುತ್ತಲೇ ಇವೆ. ●

## ಉದ್ಯಮದಲ್ಲಿ ಅದೃಷ್ಟದ ಅಂಶ

ಭವಿಷ್ಯವೆಂಬುದು ಸಂಪೂರ್ಣ ನಿಶ್ಚಿತವಾಗಿದ್ದಿದ್ದರೆ ಕ್ರಾಂತಿಕಾರಿ ನವಪ್ರವರ್ತನೆಯೊಂದನ್ನು ಹೊರತರಲು ಪ್ರತಿಭಾನ್ವಿತ ಯುವಕನೊಬ್ಬನಿಗೆ ಸಾಧ್ಯವಾಗುತ್ತಲೇ ಇರಲಿಲ್ಲ, ಅದಕ್ಕೆ ಅವಕಾಶವೇ ಇರುತ್ತಿರಲಿಲ್ಲ. ಎಲ್ಲವೂ ಮುಂದಾಗಿಯೇ ಗೊತ್ತಿರುತ್ತಿತ್ತು. ನಷ್ಟ ಭಯ, ಅನಿಶ್ಚಿತತೆಗೂ ನವಪ್ರವರ್ತಕರ ಲಾಭಕ್ಕೂ ನೇರ ನಂಟು. ನಿಜವಾಗಿ ಎಲ್ಲ ಲಾಭವೂ ಅನಿಶ್ಚಿತತೆಗೆ ಕೂಡಿಕೊಂಡೇ ಇರುತ್ತದೆ ಎಂದು ಷಿಕಾಗೊ ವಿಶ್ವವಿದ್ಯಾಲಯದ ಅರ್ಥಶಾಸ್ತ್ರಜ್ಞರಾದ ಫ್ರಾಂಕ್ ನೈಟ್ ಹೇಳುತ್ತಾರೆ. ಗತಕಾಲದ ಮಹಾ ಶ್ರೀಮಂತ ಸಾಧನೆಗಳ ವಾಸ್ತವಿಕ ಪರಿಶೀಲನೆಯಿಂದ ನಮಗೆ ಗೊತ್ತಾಗುವುದೆಂದರೆ, ಹಲವು ಸಾಧನೆಗಳ ಹಿಂದೆ ಅದೃಷ್ಟದ ಪ್ರಬಲಾಂಶವೊಂದು ಇದ್ದೇ ಇದೆ ಎಂಬುದು. ತೈಲ ಆವಿಷ್ಕಾರಗಳು, ಭಾಗ್ಯದ ಬಾಗಿಲು ತೆರೆದ ಪೇಟೆಂಟುಗಳು, ಮಾರಾಟ ಹಾಗೂ ಸಟ್ಟಾ ವಿಜಯಗಳು—ಇವೆಲ್ಲವೂ ನಮ್ಮ ಲಾಭ-ನಷ್ಟ ವ್ಯವಸ್ಥೆಯಲ್ಲಿಯ ಅದೃಷ್ಟಾಂಶದ ನಿದರ್ಶನಗಳು.

**— ಪಾಲ್ ಎ. ಸ್ಯಾಮ್ಯುಯೆಲ್‌ಸನ್**

ಹತ್ತು ವರ್ಷಗಳ ಹಿಂದಿನ ಲೇಖನ

# ಸವೆಸ್ಥಿ ತತ್ತ್ವ*

## ಉದ್ಯಮಗಳು ಯಶಸ್ವಿಯಾಗಿ ಕೆಲಸ ನಿರ್ವಹಿಸುತ್ತಿವೆಯೆ, ಅವು ಲಾಭಪ್ರದವಾಗಿವೆಯೆ ಎಂಬುದನ್ನರಿಯಲು ಒಂದು ಸರಳ ಸೂತ್ರ


**ಮೋ. ಕೃ. ಅನಂತಸ್ವಾಮಿ**
ಕೈಗಾರಿಕಾ ಹಣಕಾಸು ಶಾಖೆ
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು


ಹಲವು ಸಮಾಜಸೇವಾ ಸಂಸ್ಥೆಗಳು ಮತ್ತು ಸರ್ಕಾರಿ ಸಂಸ್ಥೆಗಳನ್ನು ಬಿಟ್ಟು ಮಿಕ್ಕ ಎಲ್ಲ ಉದ್ಯಮಗಳ ಮುಖ್ಯ ಧ್ಯೇಯವೆಂದರೆ ಲಾಭಗಳಿಕೆ. ಉದ್ಯಮ ಲಾಭ ಗಳಿಸುತ್ತಿದೆಯೋ ಅಥವಾ ನಷ್ಟ ಅನುಭವಿಸುತ್ತಿದೆಯೋ ಎಂಬ ಅರಿವು ಕಾಲಕಾಲಕ್ಕೆ ಉದ್ಯಮಿಗೆ ಮೂಡಬೇಕು. ಹೊಸ ಉದ್ಯಮವಾದಲ್ಲಿ, ಅದು ಯಾವ ದಿಸೆಯಲ್ಲಿ ಸಾಗುತ್ತಿದೆ ಎಂದು ಉದ್ಯಮಿ ಅಧ್ಯಯನ ಮಾಡಬೇಕು. ಬಂದ ಆದಾಯವೆಲ್ಲ ಲಾಭ ಅಥವಾ ಹೆಚ್ಚಳ ಎಂದುಕೊಂಡು ಯದ್ವಾತದ್ವಾ ಖರ್ಚು ಮಾಡುವ ಉದ್ಯಮಿಗಳು ಹೇರಳವಾಗಿದ್ದಾರೆ. ಶೀಘ್ರದಲ್ಲೇ ಅವರ ಉದ್ಯಮಗಳು ರೋಗಗ್ರಸ್ತವಾಗಿ ಅಂತ್ಯವಾಗುವುದಂತೂ ಖಚಿತ. ಲೆಕ್ಕಪತ್ರಗಳನ್ನು ಸರಿಯಾಗಿ ವ್ಯವಸ್ಥೆ ಮಾಡದಿದ್ದರೆ ಈ ಸಂಭವ ಹೆಚ್ಚು. ಸರಿಯಾಗಿ, ಕಾಲಕಾಲಕ್ಕೆ ಬರೆದ ಲೆಕ್ಕಪತ್ರಗಳಿಲ್ಲದಿದ್ದಲ್ಲಿ ಯಾವುದೇ ದಿವಸ ಉದ್ಯಮದ ಹಣಕಾಸು ಸ್ಥಿತಿ ಯಾವ ರೀತಿ ಇದೆಯೆಂದು ಹೇಳಲಿಕ್ಕೆ ಬರುವುದಿಲ್ಲ. ಆದಾಯ ಖರ್ಚುಗಳಿಗೆ ಸಂಬಂಧಿಸಿದ ಲೆಕ್ಕವನ್ನು ದಿನನಿತ್ಯ ಬರೆದಿಡುವುದು ಲೇಸು. ಪ್ರತಿ ತಿಂಗಳೂ ಲೆಕ್ಕಪತ್ರಗಳನ್ನು ಪರಿಶೀಲಿಸಿ, ಹಣಕಾಸಿನ ಸ್ಥಿತಿಯನ್ನು ನಿರೂಪಿಸುವ ಲೇಣೆ-ದೇಣೆ ಪಟ್ಟಿಯನ್ನು ತಯಾರಿಸಿ ಅಭ್ಯಸಿಸುವುದು ಉದ್ಯಮದ ಹಿತದೃಷ್ಟಿಯಿಂದ ಸೂಕ್ತ. ವ್ಯವಹಾರದಲ್ಲಿ ಲಾಭ ಬರುತ್ತಿದೆಯೋ ನಷ್ಟವಾಗುತ್ತಿದೆಯೋ ಎಂಬ ಸೂಚನೆ ಆಗ ಸಕಾಲಕ್ಕೆ ದೊರೆತು, ಆಡಳಿತ/ವ್ಯವಹಾರ ವೈಖರಿಯಲ್ಲಿ ಏನಾದರೂ ಬದಲಾವಣೆ ಮಾಡಬೇಕು ಎಂದು ಅನಿಸಿದಲ್ಲಿ ಆ ಬದಲಾವಣೆಯನ್ನು ಕ್ಷಿಪ್ರವಾಗಿ ಜಾರಿಗೆ ತರಬೇಕು. ಒಟ್ಟಿನಲ್ಲಿ, ಉದ್ಯಮ ಯಾವ ದಿಕ್ಕಿನಲ್ಲಿ ಸಾಗುತ್ತಿದೆ ಎಂಬ ಅರಿವು ಪ್ರತಿಯೊಬ್ಬ ಉದ್ಯಮಿಗೂ ಇರಬೇಕು.

ಉದ್ಯಮದ ಪ್ರಗತಿಯ ಒಂದು ಮುನ್ನೋಟವನ್ನು ಹೊಂದಲು 'ಸವೆಸ್ಥಿ' ವಿಶ್ಲೇಷಣೆ ಸಹಾಯ ಮಾಡುತ್ತದೆ. [Break-even ಎಂಬ ಆಂಗ್ಲ ಪ್ರಯೋಗವನ್ನು ಸಮಾದಾಯ-ವೆಚ್ಚ-ಖರ್ಚು-ಸ್ಥಿತಿ (ಸವೆಸ್ಥಿ) ಎಂದು ಕನ್ನಡಿಸಲಾಗಿದೆ.] ಉತ್ಪಾದನೆ ಇರಲಿ, ಇಲ್ಲದಿರಲಿ, ಉದ್ಯಮ ಕೆಲವು ಕನಿಷ್ಠ ಖರ್ಚುಗಳನ್ನು ಭರಿಸಲೇಬೇಕು. ಸಿಬ್ಬಂದಿಯ ವೇತನ, ಕಟ್ಟಡದ ಬಾಡಿಗೆ, ನೀರು ದೀಪಗಳ ಖರ್ಚು, ಯಂತ್ರ ಮತ್ತಿತರ ಆಸ್ತಿಯ ಮೇಲಿನ ವಿಮೆಯ ಖರ್ಚು ಮುಂತಾದವು ಈ ರೀತಿಯ ಕನಿಷ್ಠ ಖರ್ಚುಗಳು. ಈ ವೆಚ್ಚಗಳನ್ನು ಅನಿವಾರ್ಯ ವೆಚ್ಚಗಳೆಂದು ಕರೆಯಬಹುದು. ಉತ್ಪಾದನೆಯಿರುವಾಗ, ಉತ್ಪಾದನೆಯ ಮಟ್ಟವನ್ನು ಆಧರಿಸಿ ವ್ಯತ್ಯಾಸವಾಗುವ ಖರ್ಚುಗಳು ಹಲವಾರಿರುತ್ತವೆ. ಕಚ್ಚಾ ಸಾಮಗ್ರಿಯ ಮೇಲಿನ ಖರ್ಚು, ಯಂತ್ರಗಳನ್ನು ಚಾಲನೆ ಮಾಡಲು ಬೇಕಾದ ವಿದ್ಯುಚ್ಛಕ್ತಿಯ ಖರ್ಚು, ಇತ್ಯಾದಿಗಳು ಉತ್ಪಾದನೆಯ ಮಟ್ಟವನ್ನು ನೇರವಾಗಿ ಅವಲಂಬಿಸಿರುತ್ತವೆ. ಉತ್ಪಾದನೆ ಹೆಚ್ಚಾದರೆ ಆ ಖರ್ಚುಗಳು ಹೆಚ್ಚಾಗುತ್ತವೆ. ಉತ್ಪಾದನೆ ಕಡಿಮೆಯಾದರೆ ಆ ಖರ್ಚುಗಳು ಕಡಿಮೆಯಾಗುತ್ತವೆ. ಅವುಗಳನ್ನು ಉತ್ಪಾದನಾಧಾರಿತ ಖರ್ಚುಗಳು ಎನ್ನಬಹುದು. ಆದ್ದರಿಂದ, ಒಂದು ಉದ್ಯಮದ ಒಟ್ಟಾರೆ ಖರ್ಚು ಅದರ ಅನಿವಾರ್ಯ ಖರ್ಚು ಮತ್ತು ಉತ್ಪಾದನಾಧಾರಿತ ಖರ್ಚುಗಳನ್ನೊಳಗೊಂಡಿರುತ್ತದೆ.

ಉದ್ಯಮಕ್ಕೆ ಆದಾಯ ಮೂಲತಃ ಉತ್ಪನ್ನಗಳ ಮಾರಾಟದಿಂದ ಒದಗುತ್ತದೆ.

ಸವೆಸ್ಥಿ ಮಟ್ಟದಲ್ಲಿ ಸಲ್ಲತಕ್ಕ ಆದಾಯವು ಉದ್ಯಮದ ಒಟ್ಟು ವೆಚ್ಚಕ್ಕೆ ಸಮನಾಗಿರುತ್ತದೆ.




ಅಂಥ ಸ್ಥಿತಿಯಲ್ಲಿ ಉದ್ಯಮಕ್ಕೆ ಲಾಭವಾಗಲಿ ನಷ್ಟವಾಗಲಿ ಸಂಭವಿಸುವುದಿಲ್ಲ.

ಉತ್ಪಾದನೆಯ ಹೆಚ್ಚಳವಾದಂತೆಲ್ಲ ಆದಾಯವೂ ಹೆಚ್ಚುತ್ತ ಹೋಗುತ್ತದೆ. (ಉತ್ಪನ್ನವೆಲ್ಲ ಮಾರಾಟವಾಗುತ್ತದೆಂದು ಭಾವಿಸೋಣ). ಈ ತತ್ತ್ವವನ್ನು ಆದಾಯ ರೇಖೆ ನಿರೂಪಿಸುತ್ತದೆ. ಒಟ್ಟು ಖರ್ಚು ರೇಖೆ 0ಯಿಂದ (ಮೂಲದಿಂದ) ಪ್ರಾರಂಭವಾಗುವುದಿಲ್ಲ. ಏಕೆಂದರೆ, ಶೂನ್ಯ ಉತ್ಪಾದನ ಮಟ್ಟದಲ್ಲಿ ಅನಿವಾರ್ಯ ಖರ್ಚು ಇದ್ದೇ ಇರುತ್ತದೆ (ಅ.ಖ. ರೇಖೆ). ಉತ್ಪಾದನಾಧಾರಿತ ಖರ್ಚು ರೇಖೆ (ಉ.ಖ. ರೇಖೆ) ಮೂಲದಲ್ಲಿ ಪ್ರಾರಂಭವಾಗಿ ಬೆಳೆಯುತ್ತ ಹೋಗುತ್ತದೆ. ಅಂದರೆ, ಉತ್ಪಾದನೆ ಹೆಚ್ಚಿದಂತೆ ಈ ಖರ್ಚೂ ಹೆಚ್ಚುತ್ತದೆ. ಉ.ಖ. ಮತ್ತು ಅ.ಖ.ಗಳ ಮೊತ್ತವೇ ಒಟ್ಟು ಖರ್ಚು. ಇದನ್ನು ಒಟ್ಟು ಖರ್ಚು ರೇಖೆ ಪ್ರತಿನಿಧಿಸುತ್ತದೆ. ಒಟ್ಟು ಖರ್ಚು ರೇಖೆ ಉ.ಖ. ರೇಖೆಗೆ ಸಮಾನಾಂತರವಾಗಿದ್ದು ಅವುಗಳ ಮಧ್ಯದ ಅಂತರವೇ ಅ.ಖ. ಎಂದು ನಾವು ನೋಡಬಹುದು.

---

* 'ಬ್ಯಾಂಕಿಂಗ್ ಪ್ರಪಂಚ'ದ ಜೂನ್ ೧೯೮೦ರ ಸಂಚಿಕೆಯಲ್ಲಿ ಪ್ರಕಟವಾದ ಈ ಲೇಖನವನ್ನು ಇಲ್ಲಿ ಪುನರ್ಮುದ್ರಿಸುತ್ತಿದ್ದೇವೆ.

ಆದಾಯವು ಮೂಲದಲ್ಲಿ ಪ್ರಾರಂಭಿಸಿ ಉತ್ಪಾದನೆ ಹೆಚ್ಚಿದಂತೆಲ್ಲಾ ಹೆಚ್ಚುತ್ತಾ ಹೋಗುತ್ತದೆ. ಆದಾಯ ರೇಖೆ ಇದನ್ನು ತೋರಿಸುತ್ತದೆ. ಆದಾಯ ರೇಖೆ ಮತ್ತು ಒಟ್ಟು ಖರ್ಚು ರೇಖೆಗಳ ಸಂಗಮವೇ ಸಮಸ್ಥಿ ಬಿಂದು. ಆ ಬಿಂದುವಿನಲ್ಲಿ ಆದಾಯ ಖರ್ಚುಗಳು ಸಮನಾಗಿರುತ್ತವೆ. ಸಮಸ್ಥಿ ಬಿಂದುವನ್ನಾಧರಿಸಿ ಸಮಸ್ಥಿ ಉತ್ಪಾದನ ಮಟ್ಟವನ್ನು ನಾವು ಗುರುತಿಸಬಹುದು.

ಸಮಸ್ಥಿ ಬಿಂದುವನ್ನು ನಿರ್ಣಯಿಸಲು ನಮಗೆ ಗಣಿತ ಸೂತ್ರವೊಂದರ ಸಹಾಯವೂ ಇದೆ. ಆ ಸೂತ್ರ ಈ ರೀತಿ ಇದೆ :

$$\text{ಸಮಸ್ಥಿ ಆದಾಯ} = \frac{F}{S - V} \times S$$

ಇಲ್ಲಿ

F = ಅನಿವಾರ್ಯ ಖರ್ಚು

S = ಆದಾಯ

V = ಉತ್ಪಾದನಾಧಾರಿತ ಖರ್ಚು.

ಸೂಚನೆ : ಇವನ್ನು ಮಾಹೆಯಾನ ಲೆಕ್ಕ ಮಾಡಬಹುದು ಅಥವಾ ಸಾಲಿಯಾನ ಲೆಕ್ಕ ಮಾಡಬಹುದು.

ಉದಾಹರಣೆಗೆ, ಒಂದು ಉದ್ಯಮದ ಪ್ರಸಕ್ತ ಆದಾಯ ರೂ. 50,000 ಎಂದು ಇಟ್ಟುಕೊಳ್ಳೋಣ. ಅದರ ಅನಿವಾರ್ಯ ಖರ್ಚು ರೂ. 10,000ವೆಂದೂ ಆ ಮಟ್ಟದಲ್ಲಿನ ಉತ್ಪಾದನಾಧಾರಿತ ಖರ್ಚು ರೂ. 30,000ವೆಂದೂ ಭಾವಿಸೋಣ (ಎಲ್ಲಾ ಮಾಹೆಯಾನ ಅಂಕಿಗಳು). ಆಗ

$$\text{ಸಮಸ್ಥಿ ಆದಾಯ} = \frac{10{,}000}{50{,}000-30{,}000} \times 50{,}000$$

$$= \text{ರೂ. } 25{,}000.$$

ಅಂದರೆ, ಅದು ತಿಂಗಳಿಗೆ ರೂ. 25,000 ಗಳಷ್ಟು ಉತ್ಪಾದಿಸಿ ಮಾರಾಟ ಮಾಡಿದರೆ ಸಮಸ್ಥಿ ಮಟ್ಟವನ್ನು ತಲುಪಿರುತ್ತದೆ.

ಮೇಲಿನ ಸಮಸ್ಥಿ ಸೂತ್ರವನ್ನಾಧರಿಸಿ ಉದ್ಯಮಿ ತನ್ನ ಉದ್ಯಮಕ್ಕೆ ಸಂಬಂಧಿಸಿದ ಸಮಸ್ಥಿಯನ್ನು ಲೆಕ್ಕಮಾಡಿಕೊಂಡರೆ, ಉದ್ಯಮ ಸಾಗುತ್ತಿರುವ ದಿಕ್ಕಿನ ಕಲ್ಪನೆ ನಿರಾಯಾಸವಾಗಿ ದೊರೆಯುತ್ತದೆ.

ಇಲ್ಲಿ ಬ್ಯಾಂಕರುಗಳಿಗೊಂದು ಕಿವಿಮಾತು : ನಿಮ್ಮ ಸಹಾಯದಿಂದ ನಡೆಯುತ್ತಿರುವ ಉದ್ಯಮಿಗಳ ಪ್ರಗತಿಯನ್ನು ಆರು ತಿಂಗಳಿಗೊಮ್ಮೆಯಾದರೂ ಪರೀಕ್ಷಿಸಬೇಕು. ಇದನ್ನು ಸಮಸ್ಥಿ ಸೂತ್ರದ ಸಹಾಯದಿಂದ ಸುಲಭವಾಗಿ ಸಾಧಿಸಬಹುದು. ಸಮಸ್ಥಿ ವಿಶ್ಲೇಷಣೆಯಿಂದ ಸಕಾಲದಲ್ಲಿ ಉದ್ಯಮಗಳ ಕುಂದು ಕೊರತೆಗಳನ್ನು ಗುರುತಿಸಿ ಅವುಗಳ ನಿವಾರಣೆಯ ಬಗ್ಗೆ ಸೂಕ್ತ ನಿರ್ಧಾರವನ್ನು ಕೈಗೊಳ್ಳಲು ಸಹಾಯವಾಗುತ್ತದೆ. ●

# ನವೋನ್ಮೇಷಣಗಳ ಅನ್ವೇಷಣೆ: ಒಂದು ಸೋವಿಯತ್ ಪ್ರಯೋಗ*

**ಉಪಕ್ರಮ ಬಂಡವಾಳ 'ಜ್ವರ' ಸೋವಿಯತ್ ದೇಶಕ್ಕೂ ಹಬ್ಬಿದೆ. ಅಲ್ಲಿ ಕೂಡ ಹೊಸ ಹೊಸ ಉಪಜ್ಞೆಗಳ ಜನಕರೂ ನವೋನ್ಮೇಷಣ ಸಾಹಸಿಗಳೂ ಇದ್ದಾರೆ. ಅವರ ಮೆದುಳುಗಳಲ್ಲಿ ಹುಟ್ಟಿದ ಭ್ರೂಣಗಳನ್ನು ಬೆಳೆಸಿ ಪೋಷಿಸಿ ಪ್ರಜನನಗೊಳಿಸುವ ಕಾರ್ಯದಲ್ಲಿ ತೊಡಗಿದ ಸೂಲಗಿತ್ತಿ ಬ್ಯಾಂಕುಗಳ ಉಗಮವಾಗುತ್ತಿದೆ. ಅಂಥ ಹೊಸ ಪ್ರಯೋಗವೊಂದರ ಕಥೆ ಇಲ್ಲಿದೆ.**

---

ಅನುವಾದ :
**ಪಾ. ರಾಜಗೋಪಾಲ**
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ

---

ಸೋವಿಯತ್ ಒಕ್ಕೂಟದಲ್ಲಿ ಹೊಸ ಹಣಕಾಸು ಸಂಸ್ಥೆಗಳು ಪ್ರಾರಂಭವಾಗುತ್ತಿವೆ. ಸದ್ಯ ಇಂಥವು ಅನೇಕವಿಲ್ಲ, ಆದರೆ ಅವು ತಕ್ಕಮಟ್ಟಿನ ಖ್ಯಾತಿ ಪಡೆದುಕೊಂಡಿವೆ ಮತ್ತು ಯಶಸ್ವಿಯಾಗಿ ಅಭಿವೃದ್ಧಿ ಹೊಂದುತ್ತಿವೆ. ಇಂಥವುಗಳಲ್ಲಿ ಒಂದು ಬ್ಯಾಂಕು ಬೈಲೊರಷ್ಯಾದ ರಾಜಧಾನಿಯಾದ ಮಿನ್‌ಸ್ಕ್‌ನಲ್ಲಿದೆ.

1988ರ ನವೆಂಬರ್‌ನಲ್ಲಿ ಈ ಬ್ಯಾಂಕು ಪ್ರಾರಂಭವಾಯಿತು. 1989ರಲ್ಲಿ ಮಿನ್‌ಸ್ಕ್ ಬ್ಯಾಂಕ್ ಎಂದು ಅಧಿಕೃತವಾಗಿ ನೋಂದಾಯಿತವಾಯಿತು. ಜುಲೈ ತಿಂಗಳಲ್ಲಿ ಇದು ಗಣರಾಜ್ಯದ ಬ್ಯಾಂಕಾಯಿತು ಅಥವಾ ಬೈಲೊರಷ್ಯಾದ ನವೋನ್ಮೇಷಣ (innovation) ಬ್ಯಾಂಕಾಯಿತು. ಸೋವಿಯತ್ ಒಕ್ಕೂಟದಲ್ಲಿ ನಿರಂತರವಾಗಿ ಬೆಳೆಯುತ್ತಿರುವ ವಿಜ್ಞಾನ, ಉತ್ಪಾದನೆ ಹಾಗೂ ಉಪಜ್ಞೆಗಳಿಗೂ ಅವುಗಳ ಅನುಷ್ಠಾನಕ್ಕೂ ನಡುವೆ ಅಂತರ ಬೆಳೆದಿರುವುದೇ ಈ ಬ್ಯಾಂಕನ್ನೂ ಇಂಥವೇ ಆದ ಇತರ ಬ್ಯಾಂಕುಗಳನ್ನೂ ಪ್ರಾರಂಭಿಸಲು ಕಾರಣ. ಈ ಅಂತರವನ್ನು ಕೊನೆಗೊಳಿಸಬೇಕೆಂದು ಬ್ಯಾಂಕನ್ನು ಕೇಳಿಕೊಳ್ಳಲಾಗಿದೆ.

ಉದ್ಯಮ ಸಂಸ್ಥೆಗಳ ಪ್ರಯತ್ನದಿಂದಾಗಿ ಈ ಷೇರಾಧಾರಿತ ಬ್ಯಾಂಕನ್ನು ಸ್ಥಾಪಿಸಲಾಗಿದೆ. ರಾಜ್ಯದ ಸಂಸ್ಥೆಗಳು ಮಾತ್ರವಲ್ಲದೆ ಸಹಕಾರಿ ಸಂಘಗಳೂ ಸಾರ್ವಜನಿಕ ಸಂಘಟನೆಗಳೂ ಇದರ ಷೇರುಗಳನ್ನು ಪಡೆಯಬಹುದು.

ಇದರ ನಿರ್ದೇಶಕ ಮಂಡಳಿಯ ಅಧ್ಯಕ್ಷರಾದ ವ್ಲಾದಿಮಿರ್ ನಿಕೊಲಯೆವ್‌ಸ್ಕಿಯವರು ತಮ್ಮ ಸಂಸ್ಥೆಯ ಮುಂದಿರುವ ಹೊಣೆಗಳು ಯಾವುವೆಂದು ಹೇಳಿದ್ದಾರೆ. ನವೋನ್ಮೇಷಣಗಳನ್ನು ಅರಸುವುದೇ ತಮ್ಮ ಸಂಸ್ಥೆಯ ಹೊಣೆ ಎಂದು ಒಟ್ಟಿನಲ್ಲಿ ಹೇಳಿದ್ದಾರೆ. ಅಂದರೆ, ಹೊಸ ಆಲೋಚನೆಯೊಂದರ ಹುಟ್ಟಿಗೂ ಧನಪೋಷಣೆಯ ಮೂಲಕ ಅದನ್ನು ಅನುಷ್ಠಾನಕ್ಕೆ ತರುವುದಕ್ಕೂ ನಡುವಿನ ಅವಧಿಯನ್ನು ಅತ್ಯಂತ ಕಡಿಮೆಗೊಳಿಸುವುದೇ ಆಗಿದೆ ಎಂದಿದ್ದಾರೆ. ಎಲ್ಲ ಉಪಜ್ಞೆಗಳಲ್ಲೂ ನವೋನ್ಮೇಷಣಗಳಲ್ಲೂ ಬ್ಯಾಂಕಿಗೆ ಆಸಕ್ತಿ ಇರುತ್ತದೆ. ಉತ್ಪಾದನೆಯಲ್ಲಿ ಹಾಗೂ ಶಕ್ತಿಬಳಕೆಯ ತೀವ್ರತೆಯನ್ನೂ ಸಾಮಗ್ರಿಗಳ ನಿರ್ದಿಷ್ಟ ಬಳಕೆಯನ್ನೂ ಕಡಿಮೆಗೊಳಿಸುವುದರಲ್ಲೂ ಉದ್ಯಮಗಳಿಗೆ ನಾನಾ ಬಗೆಯ ಸೇವೆಗಳನ್ನು ನೀಡುವುದರಲ್ಲೂ ಬ್ಯಾಂಕಿಗೆ ಆಸಕ್ತಿಯುಂಟು.

ವೈಜ್ಞಾನಿಕ ಮತ್ತು ತಾಂತ್ರಿಕ ಅಭಿವೃದ್ಧಿಗಾಗಿ ಉದ್ಯಮವೊಂದರಿಂದ ಆದೇಶ ಬಂದಾಗ ಬ್ಯಾಂಕು ಅದಕ್ಕೆ ಸಂಬಂಧಿಸಿದ ಕ್ಷೇತ್ರಗಳಲ್ಲಿ ಕಾರ್ಯನಿರತವಾದ ವಿಶೇಷಜ್ಞರನ್ನು ಗುರುತಿಸಿ ಆ ನವೋನ್ಮೇಷಣದ ಫಲವಾದ ಕೈಗಾರಿಕೋತ್ಪಾದನೆಗೆ ಅಥವಾ ಅದರ ಅಭಿವೃದ್ಧಿಗೆ ಅಗತ್ಯವಾದ ಧನಪೋಷಣೆ ಮಾಡುವುದು.

ಇದೇ ರೀತಿ, ಒಂದು ಹೊಸ ಉಪಜ್ಞೆಯನ್ನು ಕಂಡಾಗ ಆ ಉಪಜ್ಞೆಯಲ್ಲಿ ಆಸಕ್ತಿ ಹೊಂದಬಹುದಾದ ಉದ್ಯಮಸಂಸ್ಥೆಯನ್ನು ಗುರುತಿಸಲು

---

* ಸ್ಪೂಟ್ನಿಕ್ ಪತ್ರಿಕೆಯ ಮೇ 1990ರ ಸಂಚಿಕೆಯಲ್ಲಿ ಪ್ರಕಟವಾದ A Bank Searches for Innovations ಎಂಬ ಲೇಖನದ ಅನುವಾದ

ಬ್ಯಾಂಕು ಸಹಾಯ ಮಾಡುತ್ತದೆ.

ಡಾ. ಲಿಜರೋವ್ ಉಪಜ್ಞಿಸಿರುವ ಉಪಕರಣವೊಂದರ ವಿಸ್ತರಣ ತಂತಿಗಳ ಉತ್ಪಾದನೆಯನ್ನು ಅಭಿವೃದ್ಧಿಪಡಿಸಿದ್ದು ಬ್ಯಾಂಕಿನ ಸಾಧನೆಗಳಲ್ಲೊಂದು. ಇದರಿಂದ ಅತ್ಯಂತ ಸಂಕೀರ್ಣವಾದ ಮೂಳೆ ಮುರಿತಗಳನ್ನು ಚಿಕಿತ್ಸೆ ಮಾಡುವುದು ಇದರಿಂದ ಸಾಧ್ಯವಾಗಿದೆ. ಈಗ ಬೈಲೊರಷ್ಯದಲ್ಲಿ ಈ ತಂತಿಗಳ ಕೊರತೆಯಿದೆ. ಮೂಲಭೂತವಾಗಿ ಹೊಸದಾದ ಸೆರಾಮಿಕ್—ಲೇಪನ ಅದಕ್ಕಿದೆ. ದೇಹದ ಗಾಯವನ್ನು ಇದು ಕಡಿಮೆಮಾಡುತ್ತದೆ. ಮಿನ್‌ಸ್ಕ್‌ಗೆ ೪೦ ಕಿಮೀ. ದೂರದಲ್ಲಿರುವ ಬೊರಿಸೊವ್ ನಗರದ ಯಂತ್ರಸ್ಥಾವರದಲ್ಲಿ ಈ ತಂತಿಗಳನ್ನು ಈಗ ಉತ್ಪಾದಿಸಲಾಗುತ್ತಿದೆ.

ಮಿನ್‌ಸ್ಕ್ ರೋಡ್ ಬಿಲ್ಡಿಂಗ್ ಟ್ರಸ್ಟ್ ಈಗಾಗಲೇ ತನಗೆ ಅವಶ್ಯಕವಾದ ವಿಶೇಷ ಸಿಮೆಂಟನ್ನು ಪಡೆಯುತ್ತಿದೆ. ಇದು ಸಾಂಪ್ರದಾಯಿಕ ಕಚ್ಚಾ ಸಾಮಗ್ರಿಗಳಿಂದ ಮಾಡಿದ್ದಲ್ಲ, ಎರಕದ ಮನೆಯ ಕಿಟ್ಟಗಳಿಂದ ಮಾಡಿದ್ದು. ಇದರ ಅಭಿವೃದ್ಧಿಗೆ ಕಾರಣವಾದವರಲ್ಲಿ ಮಿನ್‌ಸ್ಕ್ ವಿಶ್ವವಿದ್ಯಾನಿಲಯದ ವಿಶೇಷಜ್ಞರೂ ವಿಜ್ಞಾನಿಗಳೂ ಇದ್ದಾರೆ.

ಈ ಬ್ಯಾಂಕಿನ ಮೊದಲ ಶಾಖೆಯನ್ನು ಬೈಲೊರಷ್ಯನ್ ನಗರವಾದ ಗೊಮೆಲ್‌ನಲ್ಲಿ ಇತ್ತೀಚೆಗೆ ತೆರೆಯಲಾಯಿತು. ಮುಂದೆ ಇಂಥ ಶಾಖೆಗಳನ್ನು ಗಣರಾಜ್ಯದ ಎಲ್ಲ ಪ್ರಾದೇಶಿಕ ಕೇಂದ್ರಗಳಲ್ಲೂ ಸ್ಥಾಪಿಸಲಾಗುವುದು. ಈ ಹೊಸ ಕೇಂದ್ರದ ಚಟುವಟಿಕೆ ಬೈಲೊರಷ್ಯಾದಲ್ಲಿರುವ ಉದ್ಯಮಗಳೇ ಅಲ್ಲದೆ, ಇಡೀ ಸೋವಿಯತ್ ಒಕ್ಕೂಟದ ಉದ್ಯಮ ಸಂಸ್ಥೆಗಳ ಆಸಕ್ತಿಯನ್ನು ಕೆರಳಿಸಿದೆ. ಇವುಗಳಲ್ಲಿ ಹಲವು ಇದರಲ್ಲಿ ಷೇರುಗಳನ್ನು ಹೊಂದಿವೆ.

ಈ ಬ್ಯಾಂಕು ಹೊಂದಿರುವ ಉದ್ಯೋಗಿಗಳ ಸಂಖ್ಯೆ ಹತ್ತು ಮಾತ್ರ. ಇದರ ಕೆಲವು ಬೆಳವಣಿಗೆಗಳು ವಿದೇಶಿ ಕಂಪನಿಗಳ ಗಮನ ಸೆಳೆದಿವೆ. ಉದಾಹರಣೆಗೆ ಸ್ಥಳೀಯ ರೇಡಿಯೊ-ಇಂಜಿನಿಯರಿಂಗ್ ಸಂಸ್ಥೆಯಲ್ಲಿ ಹೊಸ ಬಗೆಯ ಗಣಕವೊಂದರ ಸ್ಥಾಪನೆಗೆ ಹಣಕಾಸು. ಈ ನವೋನ್ಮೇಷಣವನ್ನು ಸ್ಥಳೀಯವಾಗಿ ಉಪಜ್ಞಾಯಂತ್ರ (ಇನ್‌ವೆಂಟಿಂಗ್ ಮಷೀನ್) ಎಂದು ಕರೆಯುತ್ತಾರೆ. ಬ್ರಿಟನ್ ಅಮೆರಿಕಗಳಲ್ಲಿ ಇದರ ಬಗ್ಗೆ ಆಸಕ್ತಿ ಮೂಡಿದೆ. ಇದನ್ನು ಫಿನ್‌ಲೆಂಡಿಗೆ ಒದಗಿಸಲಾಗುವುದು.

ಸೋವಿಯತ್ ಒಕ್ಕೂಟದಲ್ಲಾಗಲಿ ವಿದೇಶದಲ್ಲೇ ಆಗಲಿ ಯಾವುದೇ ಉದ್ಯಮ ಸಂಸ್ಥೆಗೆ, ಸಚಿವಾಲಯಕ್ಕೆ, ಸಹಕಾರಿ ಸಂಘಕ್ಕೆ, ಕಂಪನಿಗೆ ಅಥವಾ ಖಾಸಗಿ ವ್ಯಕ್ತಿಗೆ ಈ ಬ್ಯಾಂಕು ಸೇವೆಗಳನ್ನು ನೀಡುತ್ತದೆ. ವೈಜ್ಞಾನಿಕ ಅಭಿವೃದ್ಧಿಯಿಂದ ಹಿಡಿದು, ಕೈಗಾರಿಕೆಯಲ್ಲಿ ಪ್ರಾಯೋಗಿಕವಾಗಿ ಅದನ್ನು ಅಳವಡಿಸುವ ವರೆಗೆ ವಿಶ್ವಾಸಾರ್ಹ ಉತ್ಪಾದನ ಪ್ರಕ್ರಿಯೆಗಳಿಗೂ ಸಂರಚನೆಗಳಿಗೂ—ಸಮಗ್ರ ರೀತಿಯಲ್ಲಿ ಕೂಡ—ಹಣಕಾಸು ಒದಗಣೆಯಲ್ಲಿ ಅದು ನೆರವಾಗುತ್ತದೆ. ●

# ಮಧ್ಯಸ್ಥಗಾರಿಕೆ ಚ್ಯುತಿ ಮತ್ತು ಬ್ಯಾಂಕುಗಳ ಉಳಿವು

**ಉಳಿತಾಯದಾರರು ಮತ್ತು ವಿನಿಯೋಜನದಾರರ ನಡುವೆ ಕಾರ್ಯನಿರತವಾಗಿ ಉತ್ಪಾದನ ಕ್ಷೇತ್ರಕ್ಕೆ ಬಂಡವಾಳದ ಹರಿವನ್ನು ಸುಸೂತ್ರಗೊಳಿಸುವುದು ಬ್ಯಾಂಕುಗಳು ಅನೂಚಾನವಾಗಿ ನಡಸುತ್ತ ಬಂದಿರುವ ಕಾರ್ಯಭಾರ. ಆದರೆ ಇಂದು ಅವುಗಳ ಈ ಪಾತ್ರಕ್ಕೆ ಲೋಪ ಉಂಟಾಗುತ್ತಿದೆ. ಉಳಿತಾಯದಾರರು ಹೆಚ್ಚು ಆಕರ್ಷಕ ಕ್ಷೇತ್ರಗಳನ್ನರಸುತ್ತಿದ್ದಾರೆ, ವಿನಿಯೋಜನದಾರರೂ ನೇರವಾಗಿ ಉಳಿತಾಯದಾರರತ್ತ ಕಣ್ಣುಹಾಯಿಸುತ್ತಿದ್ದಾರೆ. ಗಂಡು-ಹೆಣ್ಣುಗಳು ಪುರೋಹಿತರ ನೆರವಿಲ್ಲದೆ ನೇರವಾಗಿ ಪರಸ್ಪರ ಸಂಗಾತಿಗಳಾಗತೊಡಗಿದರೆ ಆಗ ಪುರೋಹಿತರಿಗೇನು ಕೆಲಸ? ಅವರೇನು ಮಾಡಬೇಕು?**


## ಟಿ. ಎನ್. ನಾಗಾನಂದ

ಭಾರತೀಯ ಸ್ಟೇಟ್ ಬ್ಯಾಂಕ್
ಜೆ. ಪಿ. ನಗರ ಶಾಖೆ
ಬೆಂಗಳೂರು 78


ಸರಕು ಸೇವೆಗಳ ಉತ್ಪನ್ನದ ಬೆಳವಣಿಗೆ ಒಂದು ದೇಶದ ಆರ್ಥಿಕ ಅಭಿವೃದ್ಧಿಯನ್ನು ಸೂಚಿಸುತ್ತದೆ. ಆರ್ಥಿಕ ಅಭಿವೃದ್ಧಿಗೆ ಬಂಡವಾಳ ಅತ್ಯಾವಶ್ಯಕ. ಹಣಕಾಸಿನ ಬಹುಪಾಲು ಕುಟುಂಬವಲಯದ ಉಳಿತಾಯವಾಗಿರುತ್ತದೆ. ಹಣಕಾಸಿಗಾಗಿ ಬೇಡಿಕೆಯನ್ನು ಉಳಿತಾಯದಾರರು ಪೂರೈಸುತ್ತಾರೆ. ಈ ಕಾರ್ಯವಿಧಾನ ಮಧ್ಯಸ್ಥಗಾರಿಕೆಯನ್ನು ಹುಟ್ಟುಹಾಕಿತು. ಹಣಕಾಸು ಸಂಸ್ಥೆಗಳು ಉಳಿತಾಯದಾರರಿಗೆ ನಿಧಿಯ ಭದ್ರತೆ ಮತ್ತು ದ್ರವತ್ವವನ್ನು ಒದಗಿಸಿ ಸಂಗ್ರಹಿಸಿದ ನಿಧಿಯನ್ನು ನಷ್ಟಸಂಭಾವ್ಯತೆಗಳಿಗೆ ಮತ್ತು ದ್ರವತ್ವಕ್ಕೆ ಸರಿತೂಗಿಸಿ, ಸಾಲಗಳಲ್ಲಿ ಮತ್ತು ವಿನಿಯೋಜನೆಗಳಲ್ಲಿ ಹೂಡುವುವು. ಹೀಗೆ ಹಣಕಾಸು ಸಂಸ್ಥೆಗಳು, ಅದರಲ್ಲೂ ಪ್ರಮುಖವಾಗಿ ಬ್ಯಾಂಕುಗಳು, 'ಸಂಗ್ರಹಣೆ—ವಿನಿಯೋಜನೆ' ಪ್ರಕ್ರಿಯೆಯಲ್ಲಿ ಮುಖ್ಯ ಪಾತ್ರ ವಹಿಸುತ್ತಿವೆ.

### ಭಾರತದಲ್ಲಿ ಉಳಿತಾಯದ ಚಿತ್ರ

1970ರ ದಶಕದ ಉತ್ತರಾರ್ಧದಲ್ಲಿ ಉಳಿತಾಯದ ಚಿತ್ರ ಬದಲಾವಣೆ ಪಡೆಯಿತು. ದೇಶದ ವಾರ್ಷಿಕ ತಲಾ ವರಮಾನ ಕಡಿಮೆಯಿದ್ದರೂ ಉಳಿತಾಯದಲ್ಲಿ ಹೆಚ್ಚಿನ ದರದ ಸಾಧನೆಯಾಯಿತು. ಆ ಅವಧಿಯಲ್ಲಿ ಉಂಟಾದ ಬ್ಯಾಂಕ್ ಶಾಖೆಗಳ ಬೆಳವಣಿಗೆ ಇದಕ್ಕೆ ಬಹು ಮುಖ್ಯ ಕಾರಣ. ಕುಟುಂಬ ವಲಯದ ಉಳಿತಾಯದಾರರ ಉಳಿತಾಯ ಹಣಕಾಸು ಆಸ್ತಿಯ ರೂಪದಲ್ಲಿ 1969-70ರಲ್ಲಿ ಶೇ. 44.1 ಇದ್ದದ್ದು, 1986-87ಕ್ಕೆ ಶೇ. 59.6ಕ್ಕೆ ಏರಿತು. ದೇಶದ ಒಟ್ಟು ಉಳಿತಾಯ ದರ 1970-71ರಲ್ಲಿ ಶೇ. 10.1 ಇದ್ದದ್ದು, 1988-89ಕ್ಕೆ ಶೇ. 19ನ್ನು ಮುಟ್ಟಿತು.

### ಬ್ಯಾಂಕಿನಲ್ಲಿ ಉಳಿತಾಯ

ರಾಷ್ಟ್ರೀಕರಣದ ಅನಂತರ ಠೇವಣಿಯ ರೂಪದಲ್ಲಿ ಬ್ಯಾಂಕಿಗೆ ಉಳಿತಾಯ ಹೆಚ್ಚಾಗಿ ಹರಿದುಬರತೊಡಗಿತು. ರಾಷ್ಟ್ರೀಕರಣದ ಪೂರ್ವದಲ್ಲಿ ಇದ್ದ ಬ್ಯಾಂಕ್ ಠೇವಣಿ ರೂ. 5,100 ಕೋಟಿ. 1990ರ ಮಾರ್ಚ್ ವೇಳೆಗೆ ಇದು 1,67,000 ಕೋಟಿಗೆ ಬೆಳೆಯಿತು. ಬ್ಯಾಂಕ್ ಠೇವಣಿಯಲ್ಲಿ ಕುಟುಂಬ ವಲಯದ ಪಾಲು ಶೇ. 70-75. ಒಟ್ಟು ಹಣಕಾಸು ಆಸ್ತಿಯಲ್ಲಿ ಬ್ಯಾಂಕುಗಳ ಠೇವಣಿಯ ಪಾಲು 1980-81ರಲ್ಲಿ ಶೇ. 45.8 ಇತ್ತು, 1987-88ರ ಹೊತ್ತಿಗೆ ಶೇ. 36.1ಕ್ಕೆ ಇಳಿಯಿತು. ಇದಕ್ಕೆ ವ್ಯತಿರಿಕ್ತವಾಗಿ ಜೀವವಿಮಾ ನಿಗಮ, ಯೂನಿಟ್ ಟ್ರಸ್ಟ್ ಆಫ್ ಇಂಡಿಯ, ಭವಿಷ್ಯ ನಿಧಿ—ಪೆನ್ಷನ್ ನಿಧಿ, ಸರ್ಕಾರದ ಮೇಲಿನ ಕ್ಲೇಮುಗಳ ಪ್ರಮಾಣವೂ ಏರುತ್ತಿದೆ. ಇದು 1980-81ರಲ್ಲಿ ಶೇ. 31.2 ಇದ್ದದ್ದು 1987-88ಕ್ಕೆ ಶೇ. 41ಕ್ಕೆ ಏರಿತು. ಇದಕ್ಕೆ ಸರ್ಕಾರ ದೊರಕಿಸಿದ ಪರಿಹಾರ. ವಿನಾಯಿತಿ ಕಾರಣವೆಂದು ಹೇಳಬಹುದು.

ಹಣಕಾಸು ನೀತಿಯಲ್ಲಿ ಸಡಿಲಿಕೆಯಾದರೆ ಅನೇಕ

ಸಂಸ್ಥೆಗಳು ತಮ್ಮ ಉಳಿತಾಯ ಸಂಲೇಖಗಳನ್ನು ಮಾರುಕಟ್ಟೆಯಲ್ಲಿ ಬಿಡುಗಡೆ ಮಾಡಲು ಅನುವು ಆಗುವುದು. ಮಾರುಕಟ್ಟೆಯಲ್ಲಿನ ತೀವ್ರಸ್ಪರ್ಧೆಯಿಂದಾಗಿ ಉಳಿತಾಯದಾರರ ಆದ್ಯತೆಯಲ್ಲಿ ಆಗುವ ಬದಲಾವಣೆ ಹಣಕಾಸಿನ ಸಮತೋಲವನ್ನು ನಲುಗಿಸುತ್ತದೆ. ವಿನಿಯೋಜಕರ ಆದ್ಯತೆಯಲ್ಲಿನ ಬದಲಾವಣೆ ಬ್ಯಾಂಕೇತರ ಮಧ್ಯವರ್ತಿಗಳಿಗೆ ಹೆಚ್ಚು ಸಹಾಯಕವಾಗುವುದಲ್ಲದೆ, ಮಧ್ಯಸ್ಥಗಾರಿಕೆಯ ಪ್ರಕ್ರಿಯೆಯನ್ನು ಕುಂಠಿತಗೊಳಿಸುತ್ತದೆ. ನಿಧಾನವಾಗಿ ಮಧ್ಯಸ್ಥಗಾರಿಕೆಯ ಚ್ಯುತಿಯುಂಟಾಗುತ್ತದೆ.

## ಮಧ್ಯಸ್ಥಗಾರಿಕೆ ಚ್ಯುತಿ

ಉಳಿತಾಯದಾರರ ಉಳಿತಾಯ ಬ್ಯಾಂಕಿನ ಮೂಲಕ ಅಂತಿಮವಾಗಿ ಸಾಲಗಾರರಿಗೆ ಹರಿಯುವ ಬದಲು, ಸಾಲಗಾರರು ತಾವೇ ನೇರವಾಗಿ ಉಳಿತಾಯದಾರರಿಂದ ತಮಗೆ ಬೇಕಾದ ಸಂಪನ್ಮೂಲವನ್ನು ಎತ್ತುವ ಪ್ರಕ್ರಿಯೆಯೇ ಮಧ್ಯಸ್ಥಗಾರಿಕೆ ಚ್ಯುತಿ.

## ಬಂಡವಾಳ ಮಾರುಕಟ್ಟೆಯ ಬೆಳವಣಿಗೆ

1970ರ ದಶಕದ ಕೊನೆಯಲ್ಲಿ ಉಳಿತಾಯದಾರರ ಒಲವು ಪ್ರಾಥಮಿಕ ಬಂಡವಾಳ ಮಾರುಕಟ್ಟೆಗಳತ್ತ ಹರಿಯಿತು. ಇದರಿಂದ ಉತ್ತೇಜನಗೊಂಡ ಹಲವು ಸಾರ್ವಜನಿಕ ಕಂಪನಿಗಳು ತಮ್ಮ ಬಂಡವಾಳದ ಅಗತ್ಯದ ಪೂರೈಕೆಗಾಗಿ ನೇರವಾಗಿ ಸಾರ್ವಜನಿಕರತ್ತ ತಿರುಗಿ ತಮ್ಮ ಹಸ್ತವನ್ನು ಷೇರ್, ಡಿಬೆಂಚರ್ ಮತ್ತು ಸಾವಧಿ ಠೇವಣಿಗಳನ್ನು ನೀಡುವುದರ ಮೂಲಕ ಅದನ್ನು ಪಡೆದವು.

### ಮಾರುಕಟ್ಟೆಯಲ್ಲಿ ಎತ್ತಿದ ಬಂಡವಾಳ

(ಕೋಟಿ ರೂ.ಗಳಲ್ಲಿ)

| ವರ್ಷ | ಒಟ್ಟು ಎತ್ತಿದ ಬಂಡವಾಳ | ನಿವ್ವಳ ದೇಶೀಯ ಉಳಿತಾಯ | ಎಲ್ಲಾ ಅನುಸೂಚಿತ ಬ್ಯಾಂಕುಗಳ ಠೇವಣಿ |
|---|---|---|---|
| 1980–81 | 134 | 20,981 | 37,988 |
| 1986–87 | 3,148 | 39,270 | 10,2,724 |

ಬಂಡವಾಳ ಮಾರುಕಟ್ಟೆಯ ಬೆಳವಣಿಗೆಗೆ ಪ್ರಮುಖ ಕಾರಣಗಳು ಇವು :

— ಹೆಚ್ಚಿದ ಉಳಿತಾಯದ ಬೆಳವಣಿಗೆ,
— ಉಳಿತಾಯದಾರರಲ್ಲಿ ಮೂಡಿದ ಹೆಚ್ಚು ಅರಿವು,
— ಮಧ್ಯಸ್ಥಗಾರಿಕೆಯಿಲ್ಲದೆ ವಿನಿಯೋಜಿಸಿದರೆ ಒದಗುವ ಹೆಚ್ಚು ಪ್ರತಿಫಲ, ಕಡಿಮೆ ವೆಚ್ಚ,
— ತೆರಿಗೆ ವಿನಾಯಿತಿ,
— ಪರಸ್ಪರ ನಿಧಿಗಳ ಉಗಮ,
— ನಷ್ಟ ಸಂಭಾವ್ಯತೆಯನ್ನು ಎದುರಿಸಲು ಉಳಿತಾಯದಾರರು ತೋರಿಸಿರುವ ಧೈರ್ಯ.
— ಸಾರ್ವಜನಿಕ ವಲಯದ ಬಾಂಡುಗಳ ಕೊಳ್ಳಿಕೆ,
— ಮಾರುವಿಕೆಯಲ್ಲಿ ಬ್ಯಾಂಕುಗಳೇ ತೋರಿಸಿರುವ ಆಸಕ್ತಿ.

## ಮಧ್ಯಸ್ಥಗಾರಿಕೆ ಚ್ಯುತಿಯಿಂದ ಬ್ಯಾಂಕುಗಳು ಎದುರಿಸಬೇಕಾದ ಅಪಾಯಗಳು

**1 ಹೆಚ್ಚಿದ ಸ್ಪರ್ಧೆ :** ಅಷ್ಟೇನೂ ಸ್ಪರ್ಧೆಯಿರದ 1960ರ ಮತ್ತು 1970ರ ದಶಕಗಳಲ್ಲಿ ಬ್ಯಾಂಕುಗಳಿಗೆ ಠೇವಣಿಗಳು ತಾವಾಗಿಯೇ ಹರಿದುಬರುತ್ತಿದ್ದುವು. ಭದ್ರತೆ, ದ್ರವತ್ವ ಮತ್ತು ಶಾಖಾಜಾಲಗಳು ಠೇವಣಿಗಳ ಒಳಹರಿವಿಗೆ ಪುಷ್ಟಿ ಕೊಟ್ಟುವು. ಆದರೆ 1980ರ ದಶಕದಲ್ಲಿ ಬ್ಯಾಂಕುಗಳು ತಮ್ಮಲ್ಲಿನ ಠೇವಣಿಯನ್ನು ಕಾಪಾಡಿಕೊಳ್ಳುವುದಷ್ಟೇ ಅಲ್ಲದೆ ಮತ್ತಷ್ಟು ಸಂಗ್ರಹಿಸುವಲ್ಲೂ ಬಹಳ ಪ್ರಯತ್ನ ಪಡಬೇಕಾಗಿ ಬಂತು. ವಿನಿಯೋಜಕರಲ್ಲಿ ಮೂಡಿದ ಹೆಚ್ಚಿನ ಅರಿವು, ವಿನಿಯೋಜಿಸಲು ಬೇಕಾದ ಅವಕಾಶಗಳ ಹೆಚ್ಚಳ, ಬಂಡವಾಳ ಮಾರುಕಟ್ಟೆಗಳ ಬೆಳವಣಿಗೆ, ಅಲ್ಲದೆ ಬ್ಯಾಂಕುಗಳು ನೀಡುವ ಬಡ್ಡಿಯ ದರ ಬ್ಯಾಂಕೇತರ ಸಂಸ್ಥೆಗಳು ನೀಡುವ ದರಕ್ಕಿಂತ ಕಡಿಮೆ ಇರುವುದು—ಈ ಕಾರಣಗಳಿಂದಾಗಿ ಬ್ಯಾಂಕುಗಳು ತಮ್ಮ ಠೇವಣಿ ಸಂಗ್ರಹಣೆಯಲ್ಲಿ ಸ್ವಲ್ಪ ಆಕರ್ಷಣೆಯನ್ನು ಕಳೆದುಕೊಂಡಿವೆ.

**2 ಲಾಭಪ್ರದತೆಯಲ್ಲಿ ಕಡಿತ :** ಒಳ್ಳೆಯ ಸಾಲಗಾರರು ತಮಗೆ ಬೇಕಾದ ಸಂಪನ್ಮೂಲವನ್ನು ಕಡಿಮೆ ದರದಲ್ಲಿ ಮಾರುಕಟ್ಟೆಯಲ್ಲಿ ತಾವೇ ಎತ್ತುವುದರಿಂದ ಬ್ಯಾಂಕುಗಳ ಮೇಲಿನ ಅವಲಂಬನೆ ಕಡಿಮೆಯಾಗಿದೆ. ಇದರಿಂದಾಗಿ ಬ್ಯಾಂಕುಗಳು ತಮ್ಮ ಉದರಿಯನ್ನು ಕಡಿಮೆ ದರದಲ್ಲಿ ನೀಡಲು ಒತ್ತಡ ಉಂಟಾಗಿದೆ. ಇಲ್ಲದೆ ಹೋದಲ್ಲಿ ಒಳ್ಳೆಯ ಸಾಲಗಾರರು ಬ್ಯಾಂಕಿನೊಂದಿಗೆ ತಮ್ಮ ಸಂಬಂಧವನ್ನು ಕಡಿದುಕೊಳ್ಳುವರು. ಆದ್ಯತಾವಲಯಕ್ಕೆ ನೀಡುವ ಉದರಿಗೆ ನಿಗದಿಪಡಿಸುವ ಬಡ್ಡಿ ದರವನ್ನು ಪುನರ್ರಚಿಸಿ ಲಾಭಪ್ರದತೆಯನ್ನು ಅವು ಇಂದು ಹೆಚ್ಚಿಸಿಕೊಳ್ಳಬೇಕಿದೆ.

**3 ನಿಷ್ಕ್ರಿಯ ಮತ್ತು ನಷ್ಟ ಭಯವಿರುವ ಆಸ್ತಿಗಳ ಹೆಚ್ಚಳ :** ಸಾಲಗಾರರು ಬ್ಯಾಂಕುಗಳನ್ನು ಅವಲಂಬಿಸುವುದು ಕಡಿಮೆಯಾದರೆ ಬ್ಯಾಂಕುಗಳು ತಮ್ಮ ಸಂಪನ್ಮೂಲ ವಿನಿಯೋಜನೆಯ ಅವಕಾಶಗಳಿಗಾಗಿ ಪರಿತಪಿಸಬಹುದು. ಇದರಿಂದ ಹೆಚ್ಚು ನಷ್ಟಸಂಭಾವ್ಯತೆಯುಳ್ಳ ಪ್ರವರ್ತನಗಳಲ್ಲಿ ವಿನಿಯೋಜಿಸಬೇಕಾಗಿ ಬಂದು ಪರಿತಪಿಸಬಹುದು. ನಿಧಿಯ ಭದ್ರತೆಗೆ ಪೆಟ್ಟು ಬೀಳಬಹುದು. ಹೀಗೆ ಮುಂದುವರಿದಲ್ಲಿ ಮತ್ತು ಈ ನಷ್ಟಸಂಭಾವ್ಯತೆಯುಳ್ಳ ಪ್ರವರ್ತನಗಳು ಪ್ರತಿಫಲ ನೀಡದೆ ಹೋದಲ್ಲಿ ಬ್ಯಾಂಕುಗಳಲ್ಲಿ ಲಾಭಕಾರದ ಆಸ್ತಿಗಳು ಹೆಚ್ಚುವುವು.

**4 ಸಣ್ಣ ಬ್ಯಾಂಕುಗಳ ಭವಸಾಮರ್ಥ್ಯಕ್ಕೆ ಪೆಟ್ಟು :** ಮೇಲೆ ಹೇಳಿರುವ ಅಪಾಯಗಳನ್ನು ದೊಡ್ಡ ಬ್ಯಾಂಕುಗಳು ತಕ್ಕಮಟ್ಟಿಗೆ ನಿಭಾಯಿಸಬಲ್ಲುವು. ಆದರೆ ಸಣ್ಣ ಬ್ಯಾಂಕುಗಳು ಸ್ಪರ್ಧೆಯಲ್ಲಿ ಉಳಿಯುವುದೇ ಕಷ್ಟವಾಗುತ್ತದೆ. ಸ್ವಲ್ಪ ಹೆಚ್ಚು ಕಡಿಮೆಯಾದರೂ ಅವುಗಳ ಅಸ್ತಿತ್ವಕ್ಕೆ ಧಕ್ಕೆ ಉಂಟಾಗುತ್ತದೆ. ಈ ಸಣ್ಣ ಬ್ಯಾಂಕುಗಳ ಅಳಿವು ಬ್ಯಾಂಕಿಂಗ್ ಸಂರಚನೆಯಲ್ಲಿ ಏರುಪೇರು ಉಂಟುಮಾಡುತ್ತದೆ.

**5 ಅನುಪಯುಕ್ತ ಅಧೋರಚನೆ :** ಬ್ಯಾಂಕುಗಳು ಹಲವು ವರ್ಷಗಳಿಂದ ಕಷ್ಟಪಟ್ಟು ವ್ಯಾಪಕ ಅಧೋರಚನೆಯನ್ನು ಬೆಳೆಸಿಕೊಂಡು ಬಂದಿವೆ. ಹಣಕಾಸು ಮಧ್ಯಸ್ಥಗಾರಿಕೆಯಲ್ಲಿ ಬ್ಯಾಂಕುಗಳ ಪಾತ್ರ ಕಡಿಮೆಯಾಗುತ್ತ ಬಂದಲ್ಲಿ ಈ ಅಧೋರಚನೆಯ ಬಳಕೆಯನ್ನು ಸಾಮರ್ಥ್ಯದ ಪರಿಮಿತಿಗಿಂತ ಕಡಿಮೆ ಉಪಯೋಗಿಸಿಕೊಳ್ಳುವಂತಾಗುತ್ತದೆ.

[ವಿವರಕ್ಕೆ ಮುಂದಿನ ಪುಟ ನೋಡಿ]

ಮುಂದಿನ ಪುಟದಲ್ಲಿ ನೀಡಿರುವ ಅಂಕಿಅಂಶದ ಪ್ರಕಾರ ಶೇ. 87ರಷ್ಟು ಬ್ಯಾಂಕ್ ಉಳಿತಾಯದಾರರು ರೂ. 50,00ಕ್ಕಿಂತ ಕಡಿಮೆ ಉಳ್ಳವರು. ಶೇ. 70-77 ಬ್ಯಾಂಕ್ ಉಳಿತಾಯದಾರರು ರೂ. 2,000ಕ್ಕಿಂತ ಕಡಿಮೆ ಠೇವಣಿ ಹೊಂದಿರುವವರು. ಇವರು ತಮ್ಮ ಉಳಿತಾಯವನ್ನು ದ್ರವತ್ವ ಕಡಿಮೆ ಇರುವ ಸಂಲೇಖಗಳಲ್ಲಿ ಹೂಡಲು ಬಯಸುವುದಿಲ್ಲ. ಅದು

## ಬ್ಯಾಂಕಿನಲ್ಲಿ ಉಳಿತಾಯದಾರರು

| ಪಟ್ಟಣ ಪ್ರದೇಶದಲ್ಲಿ ಶೇ. | ಉಳಿತಾಯದ ಮಟ್ಟ ರೂ. | ಗ್ರಾಮೀಣ ಪ್ರದೇಶದಲ್ಲಿ ಶೇ. | ವಾರ್ಷಿಕ ಆದಾಯ ರೂ. | ಬ್ಯಾಂಕಿನಲ್ಲಿ ಉಳಿತಾಯದಾರರು ಶೇ. |
|---|---|---|---|---|
| 35 | 0—500 | 41 | 24,000ದವರೆಗೆ | 74 |
| 18 | 501—1,000 | 19 | 24,001—60,000 | 24 |
| 17 | 1,001—2,000 | 17 | 6,0000ಕ್ಕೂ | |
| 17 | 2001—5000 | 15 | ಮೇಲ್ಪಟ್ಟು | 2 |
| 8 | 5,001—10,000 | 5 | | |
| 5 | 10,001— | 3 | | |

ದರಿಂದ ಇವರು (ರೂ. 2,000ಕ್ಕಿಂತ ಕಡಿಮೆ ಉಳಿತಾಯ ಉಳ್ಳವರು) ಬ್ಯಾಂಕಿನೊಂದಿಗೆ ತಮ್ಮ ಸಂಬಂಧವನ್ನು ಬೆಳೆಸುವರು ಮತ್ತು ಮುಂದುವರಿಸುವರು. ರೂ. 5,000ಕ್ಕೂ ಮೇಲ್ಪಟ್ಟು ಉಳಿತಾಯ ಇರುವವರು ಕೂಡ ತಕ್ಕಮಟ್ಟಿನ ಪಾಲನ್ನು ಬ್ಯಾಂಕಿನಲ್ಲೆ ಹೂಡಲು ಬಯಸುತ್ತಾರೆ. ಮಧ್ಯಸ್ಥಗಾರಿಕೆ ಚ್ಯುತಿಯಿಂದ ಒದಗಿ ಬರಬಹುದಾದ ಅಪಾಯ ಠೇವಣಿ ಒಳಹರಿವಿಗೆ ಅಷ್ಟೇನೂ ಇಲ್ಲದಿದ್ದರೂ, ಉದರಿಯ ಹೊರಹರಿವಿಗೆ ಆತಂಕವುಂಟಾಗಿದೆ. ಲಾಭಪ್ರದ ವಿನಿಯೋಜನೆಯ ಅವಕಾಶಗಳು ಕಡಿಮೆಯಾಗಿವೆ.

ಆದಾಯ ತೆರಿಗೆ ಕೊಡುವ ವರ್ಗದಲ್ಲಿ ಬರುವ ಉಳಿತಾಯದಾರರು ತೆರಿಗೆ ವಿನಾಯಿತಿ ನೀಡುವ ಸಂಲೇಖಗಳ ಕಡೆಗೆ ಆಕರ್ಷಿತರಾಗಿ ಅವುಗಳಲ್ಲಿ ತೊಡಗಿಸುವರು. ಬಹುಪಾಲು ಸಂಖ್ಯೆಯಲ್ಲಿ ಸಣ್ಣ ಉಳಿತಾಯದಾರರು ತಮ್ಮ ಉಳಿತಾಯವನ್ನು ಬ್ಯಾಂಕುಗಳಲ್ಲೇ ಹೂಡುವರು. ಅಲ್ಲದೆ ವರ್ಷದಿಂದ ವರ್ಷಕ್ಕೆ ಇವರ ಸಂಖ್ಯೆ ಹೆಚ್ಚಾಗಿ, ಬ್ಯಾಂಕುಗಳು ಹೆಚ್ಚು ಹೆಚ್ಚು ಖಾತೆಗಳನ್ನು ನಿರ್ವಹಿಸಬೇಕಾಗುವುದು. ಸೇವಾ ವೆಚ್ಚ ಹೆಚ್ಚಾಗಿ ಲಾಭಪ್ರದತೆ ಕುಂಠಿತವಾಗುತ್ತದೆ.

### ಅವಕಾಶಗಳು

ಹಣಕಾಸು ಮಧ್ಯಸ್ಥಗಾರಿಕೆ ಚ್ಯುತಿ ಮತ್ತು ಹಣಕಾಸು ನೀತಿಯ ಸಡಿಲಿಕೆಯಿಂದಾಗಿ ಬರುವ ಅಪಾಯಗಳನ್ನು ಸಾಕಷ್ಟು ಧೈರ್ಯದಿಂದ ಬ್ಯಾಂಕುಗಳು ಇಂದು ಎದುರಿಸಬೇಕಿದೆ. ಈ ಪರಿಸರಕ್ಕೆ ಹೊಂದಿಕೊಳ್ಳಲು ಅವು ತಮ್ಮ ಕಾರ್ಯವಿಧಾನದಲ್ಲಿ ಕೆಲವು ಬದಲಾವಣೆಗಳನ್ನು ತಂದಿವೆ. ಅಂದರೆ ಬಂದಿರುವ-ಬರಲಿರುವ ಅಪಾಯಗಳನ್ನೇ ಅವಕಾಶಗಳನ್ನಾಗಿ ಉಪಯೋಗಿಸಿಕೊಂಡು ಬ್ಯಾಂಕುಗಳು ಇಂದು ಕಾರ್ಯಮಗ್ನವಾಗಿ ಮುನ್ನುಗ್ಗುತ್ತಿವೆ.

1 ಆಕ್ರಮಣಶೀಲ ಮಾರಾಟಗಾರಿಕೆ : ಬ್ಯಾಂಕುಗಳು ತಮ್ಮ ಉತ್ಪನ್ನಗಳನ್ನು ಆಕರ್ಷಕ ಪ್ಯಾಕೇಜುಗಳನ್ನಾಗಿ ಪರಿವರ್ತಿಸಿ ಮಾರಾಟ ಮಾಡಲು ಕಲಿತುಕೊಂಡಿವೆ. ಇದಕ್ಕಾಗಿ ಮಾರುಕಟ್ಟೆ ವಿಭಾಗಗಳನ್ನೇ ತೆರೆದಿವೆ ಮತ್ತು ವಿಶೇಷ ಸಿಬ್ಬಂದಿ ವರ್ಗವನ್ನೇ ಬೆಳೆಸಿವೆ.

2 ಶುಲ್ಕ ಆಧಾರಿತ ವ್ಯವಹಾರ : ಸಲಹಾ ಸೇವೆ, ಉದರಿಗಳ ಸಾಂಘೀಕರಣ, ಸಾರ್ವಜನಿಕ ಇಷ್ಯೂಗಳ ವ್ಯವಸ್ಥಾಪನೆ, ಇತರ ನವೋನ್ಮೇಷ ಸೇವೆಗಳನ್ನು ಶುಲ್ಕದ ಆಧಾರದ ಮೇಲೆ ನೀಡಿ ತಮ್ಮ ಆದಾಯವನ್ನು ಬ್ಯಾಂಕುಗಳು ಗಳಿಸುತ್ತಿವೆ. ಪರಂಪರಾನುಗತವಾಗಿ ಬಂದಿರುವ ಠೇವಣಿಯನ್ನು ಸ್ವೀಕರಿಸುವ, ಉದರಿಯನ್ನು ವಿನಿಯೋಜಿಸುವ ಪ್ರಕ್ರಿಯೆ ಇಂದು ಹೊಸ ಕ್ಷೇತ್ರಗಳತ್ತ ಬ್ಯಾಂಕುಗಳ ಗಮನವನ್ನು ಸೆಳೆದಿದೆ.

3 ದಕ್ಷತೆಯ ಹೆಚ್ಚಳ : ಸಂಪನ್ಮೂಲ ಸಂಗ್ರಹಣ ದರ ಮತ್ತು ವಿನಿಯೋಜನೆಯ ಮೇಲೆ ಗಳಿಸುವ ದರದ ನಡುವಣ ಅಂತರ ಕಿರಿದಾಗುತ್ತಿದೆ. ತಮ್ಮ ಲಾಭಪ್ರದತೆಯನ್ನು ಉಳಿಸಿಕೊಳ್ಳಲೇ ಅಲ್ಲದೆ ಮತ್ತಷ್ಟು ಹೆಚ್ಚಿಸಿಕೊಳ್ಳಲೂ ಬ್ಯಾಂಕುಗಳು ಆಂತರಿಕ ದಕ್ಷತೆ ಮತ್ತು ನಿಯಂತ್ರಣ ವ್ಯವಸ್ಥೆಯ ಕಡೆ ಗಮನ ನೀಡಿವೆಯಲ್ಲದೆ, ಸೋರುವಿಕೆಯನ್ನು ತಡೆಯಲು ಕ್ರಮಗಳನ್ನು ಕೈಗೊಂಡಿವೆ.

4 ಸೇವೆಗಳ ವ್ಯಾಪಕತೆ : ಬ್ಯಾಂಕುಗಳು ನೀಡುವ ವ್ಯಾಪಕ ಸೇವೆಗಳನ್ನು ಬೇರೆ ಯಾವ ಹಣಕಾಸು ಮಧ್ಯಸ್ಥಗಾರರೂ ಮೀರಿಸಲಾರರು. ಇದು ಬ್ಯಾಂಕಿನ ಪರವಾಗಿ ಇರುವ ಒಂದು ಪ್ರಬಲ ಅಂಶ. ಗ್ರಾಹಕರನ್ನು ಹೆಚ್ಚಿಸಿಕೊಳ್ಳಲು-ಆಕರ್ಷಿಸಲು—ತೃಪ್ತಿಕರ ಗ್ರಾಹಕ ಸೇವೆ ನೀಡುವುದು ಬಹು ಮುಖ್ಯವಾಗಿದೆ. ಈ ನಿಟ್ಟಿನಲ್ಲಿ ಇಂದು ನಮ್ಮ ಬ್ಯಾಂಕುಗಳು ಕ್ರಮಗಳನ್ನು ಕೈಗೊಂಡಿವೆ.

5 ಸಹ ಸಂಸ್ಥೆಗಳ ಸ್ಥಾಪನೆ: ಬ್ಯಾಂಕಿನ ವ್ಯವಹಾರಗಳನ್ನು ಶಾಸನಾನುಗುಣವಾಗಿ ನಿಯಂತ್ರಿಸಲಾಗಿದೆ. ಇಂದು ಬೆಳೆಯುತ್ತಿರುವ ಹಣಕಾಸು ವಲಯ ಮಾರುಕಟ್ಟೆಗಳಿಂದ ಒದಗಿ ಬಂದಿರುವ ಅವಕಾಶಗಳನ್ನು ಉಪಯೋಗಿಸಿಕೊಳ್ಳಲು ಅವು ತಮ್ಮ ಸಹಾಯಕ ಸಂಸ್ಥೆಗಳನ್ನು ತೆರೆದಿವೆ. ಬ್ಯಾಂಕುಗಳು ತಮ್ಮ ಸೇವೆಯ ಜಾಲ ಮತ್ತು ಶಾಖಾ ವಿಸ್ತರಣೆಯ ಮೂಲಕ ಸಹಾಯಕ ಸಂಸ್ಥೆಗಳನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳುತ್ತಿವೆ.

6 ಕಿರು ವ್ಯವಹಾರ ಬ್ಯಾಂಕಿಂಗ್ : ಕಾರ್ಪೊರೇಟ್ ಸಾಲಗಾರರ ಸಂಖ್ಯೆಯಲ್ಲಿ ಇಳಿಮುಖವಾಗುತ್ತಿರುವ ಕಾರಣ ಬಳಕೆದಾರರ ಸಾಲಗಳತ್ತ ಬ್ಯಾಂಕುಗಳ ಗಮನ ಸೆಳೆದು, ಆಕರ್ಷಕ ಯೋಜನೆಗಳನ್ನು ಆ ವರ್ಗದ ಜನರಿಗೆ ರೂಪಿಸಿವೆ.

7 ಪಾವತಿಯ ವಿಧಾನ : ಯಾವುದೇ ಹಣಕಾಸು ವ್ಯವಹಾರ ನಡೆಯುವಲ್ಲಿ ಅಥವಾ ಪೂರ್ಣಗೊಳ್ಳುವಲ್ಲಿ ಚೆಕ್ಕುಗಳ ಪಾತ್ರ ಅದ್ವಿತೀಯ. ದಿನೇ ದಿನೇ ಚೆಕ್ಕುಗಳ ಬಳಕೆ ಗಣನೀಯವಾಗಿ ಹೆಚ್ಚುತ್ತಿದೆ. ಚೆಕ್ಕುಗಳ ಮೂಲಕ ಆಗುವ ಪಾವತಿಯ ಪ್ರಕ್ರಿಯೆಯನ್ನು ಸರಳೀಕರಿಸಲು ಮತ್ತು ತ್ವರಿತವಾಗಿ ಪೂರ್ಣಗೊಳಿಸಲು ಯಾಂತ್ರೀಕರಣ ಮತ್ತು ಗಣಕೀಕರಣಗಳನ್ನು ಬ್ಯಾಂಕುಗಳು ಇಂದು ಅಳವಡಿಸಿಕೊಂಡಿವೆ. ಕಾಂತೀಯ ಮಸಿ ಲಿಪಿಗ್ರಹಣ, (ಎಂ ಐಸಿ ಆರ್) ಚೆಕ್ಕುಗಳ ಬಳಕೆ, ರಾಷ್ಟ್ರೀಯ ತೀರುವೆ ಕೋಶ, ಹರಿಕಾರ ಸೇವೆ, ಸುಧಾರಿತ ಸಂಪರ್ಕ ವ್ಯವಸ್ಥೆ—ಇವು ಇಂದು ವ್ಯವಹಾರಗಳನ್ನು ತ್ವರಿತವಾಗಿ ಪೂರ್ಣಗೊಳಿಸಲು ಅನುವಾಗಿ ಬಂದಿವೆ.

8 ಗ್ರಾಮೀಣ ಮಾರುಕಟ್ಟೆ : ಗ್ರಾಮೀಣ ಹಣಕಾಸು ಮಾರುಕಟ್ಟೆಯನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲು ಹೆಚ್ಚು ಅವಕಾಶಗಳಿವೆ. ಇಂದು ಗ್ರಾಮೀಣ ಪ್ರದೇಶದಲ್ಲಿ ಬ್ಯಾಂಕುಗಳ ಶಾಖಾಜಾಲವಿರುವುದರಿಂದ, ಅವು ಹೆಚ್ಚು ಅನುಕೂಲ ಸ್ಥಿತಿಯಲ್ಲಿವೆ. ನವೋನ್ಮೇಷ ಯೋಜನೆಗಳನ್ನು ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳಲು ವಿಪುಲ ಅವಕಾಶ ನಮ್ಮ ಬ್ಯಾಂಕುಗಳಿಗಿದೆ.

ಹಣಕಾಸು ಅಧೋರಚನೆಯ ಬೆಳವಣಿಗೆ ಮತ್ತು ವೈವಿಧ್ಯೀಕರಣ ಯಾವುದೇ ದೇಶದ ಆರ್ಥಿಕ ಬೆಳವಣಿಗೆಗೆ ಆವಶ್ಯಕ. ಇಂದು ಬ್ಯಾಂಕುಗಳು ಚಾಣಾಕ್ಷತೆಯಿಂದ ತಮಗೆ ಒದಗಿ ಬರುವ ಬಂದಿರುವ ಅಪಾಯಗಳನ್ನೇ ಅವಕಾಶಗಳನ್ನಾಗಿ ಪರಿವರ್ತಿಸಿಕೊಳ್ಳುತ್ತಿವೆ. ಮಧ್ಯಸ್ಥಗಾರಿಕೆ ಚ್ಯುತಿಯನ್ನು ಎದುರಿಸಲು ಅಥವಾ ನಿಭಾಯಿಸಲು, ಬ್ಯಾಂಕುಗಳು ಸಂರಚನೆಯಲ್ಲಿ ಮತ್ತು ಕಾರ್ಯವಿಧಾನದಲ್ಲಿ ಬದಲಾವಣೆಗಳನ್ನು ತರಬೇಕಿದೆ. ಇದೇ ಸಮಯದಲ್ಲಿ ಬ್ಯಾಂಕುಗಳು ಸ್ಪರ್ಧೆಯಲ್ಲಿ ಉಳಿಯಲು ತಮ್ಮ ನೀತಿಯನ್ನು ಬದಲಿಸಿಕೊಳ್ಳಬೇಕಿದೆ. ದೃಷ್ಟಿ ವೈಶಾಲ್ಯದ ಕಡೆಗೆ ಗಮನ ನೀಡಬೇಕಿದೆ. ●

---



---

# ಬ್ಯಾಂಕಿಂಗ್ ಸುದ್ದಿಸಾರ

**ಟಿ. ಕೆ. ರಂಗನಾಥ್**, ವ್ಯವಸ್ಥಾಪಕರು
ಭಾರತೀಯ ಸ್ಟೇಟ್ ಬ್ಯಾಂಕ್, ಚಿಕ್ಕಮಗಳೂರು

## ಪ್ರಥಮ ಮಹಿಳಾ ಬ್ಯಾಂಕ್

ಪಾಕಿಸ್ತಾನದಲ್ಲಿ ಮಹಿಳೆಯರಿಗಾಗಿಯೇ ಮೀಸಲಾದ ಬ್ಯಾಂಕೊಂದು ಡಿಸೆಂಬರ್ 1989ರಂದು ಕಾರ್ಯಾರಂಭ ಮಾಡಿದೆ. ಫಸ್ಟ್ ಉಮನ್ ಬ್ಯಾಂಕ್ ಲಿಮಿಟೆಡ್ ಕರಾಚಿಯಲ್ಲಿ ತನ್ನ ಶಾಖೆ ತೆರೆದಿದ್ದು, ಮಹಿಳಾ ಉದ್ಯಮಶೀಲರಿಗೆ ಧನಸಹಾಯ ಸಲಹೆ ನೀಡುವುದರ ಜೊತೆಗೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಮಹಿಳೆಯರಿಗೆ ಉದ್ಯೋಗಾವಕಾಶವನ್ನು ಕಲ್ಪಿಸಿದೆ. 47 ಲಕ್ಷ ಅಮೆರಿಕನ್ ಡಾಲರುಗಳ ಬಂಡವಾಳ ಹೊಂದಿದ ಈ ಬ್ಯಾಂಕ್ ಇಸ್ಲಾಮಾಬಾದ್ ಒಳಗೊಂಡಂತೆ ಹಲವಾರು ಪ್ರಾಂತ್ಯಗಳ ರಾಜಧಾನಿಗಳಲ್ಲಿ ತನ್ನ ಶಾಖೆ ತೆರೆಯಲಿದೆ.

## ಬ್ಯಾಂಕುಗಳ ದ್ವೈವಾರ್ಷಿಕ ಕ್ರಿಯಾಯೋಜನೆ

ಏಪ್ರಿಲ್ 1990ರಿಂದ ಮಾರ್ಚ್ 1992ರ ಅವಧಿಗೆ ಕ್ರಿಯಾಯೋಜನೆಯೊಂದನ್ನು ತಯಾರಿಸುವಂತೆ ಸರಕಾರಿ ಕ್ಷೇತ್ರದ ಬ್ಯಾಂಕುಗಳಿಗೆ ಭಾರತೀಯ ರಿಸರ್ವ್ ಬ್ಯಾಂಕ್ ಆದೇಶ ನೀಡಿದೆ. ಈ ಯೋಜನೆಯಡಿ ಭಾರತೀಯ ರಿಸರ್ವ್ ಬ್ಯಾಂಕಿನ ಗವರ್ನರ್ ಆಯಾ ಬ್ಯಾಂಕಿನ ಅಧ್ಯಕ್ಷರೊಡನೆ ಯೋಜನೆಯ ಪ್ರಗತಿಯ ಪರಾಮರ್ಶೆಯನ್ನು ಮೂರು ತಿಂಗಳಿಗೊಮ್ಮೆ ನಡೆಸುತ್ತಾರೆ. ಇದು ಮೂರನೆಯ ಕ್ರಿಯಾಯೋಜನೆಯಾಗಿದ್ದು, ಈ ಬಾರಿ ಲಾಭಪ್ರದತೆ, ಗ್ರಾಹಕಸೇವೆ, ಉದರಿ ವ್ಯವಸ್ಥಾಪನ ಮತ್ತು ಮನೆ ವಾರ್ತೆಗಳ ಮೇಲೆ ಹೆಚ್ಚಿನ ಒತ್ತು ಕೊಡಲಾಗಿದೆ.

## ಕೃಷಿ ಮತ್ತು ಗ್ರಾಮೀಣ ಋಣ ಪರಿಹಾರ ಯೋಜನೆ

ಕೃಷಿ ಮತ್ತು ಗ್ರಾಮೀಣ ಋಣ ಪರಿಹಾರ ಯೋಜನೆಯೊಂದನ್ನು ಸರಕಾರ ಘೋಷಿಸಿದೆ. ಈ ಯೋಜನೆಯಡಿ ಸರಕಾರಿ ಕ್ಷೇತ್ರದ ಹಾಗೂ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಂದ ಸಾಲ ಪಡೆದು ಕಟಬಾಕಿದಾರರಾದವರಿಗೆ ಪರಿಹಾರ ದೊರಕುತ್ತದೆ. ಸಹಕಾರಿ ಬ್ಯಾಂಕುಗಳಿಂದ ಸಾಲ ಪಡೆದವರಿಗೆ ಇಂತಹುದೇ ಒಂದು ಯೋಜನೆಯನ್ನು ರೂಪಿಸುವಂತೆ ರಾಜ್ಯ ಸರಕಾರಗಳಿಗೆ ತಿಳಿಸಲಾಗಿದೆ. ಈ ಪರಿಹಾರ ಯೋಜನೆಯ ಮುಖ್ಯ ಅಂಶಗಳೆಂದರೆ :

1 ಋಣಪರಿಹಾರ ಸರ್ಕಾರಿ ಕ್ಷೇತ್ರದ ಬ್ಯಾಂಕುಗಳ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸಾಲಗಾರರಿಗೆ ಮಾತ್ರ ದೊರಕುತ್ತದೆ.

2 2-10-89ರಂದು ಕಟಬಾಕಿಯಾಗಿರುವ ದುಡಿಯುವ ಬಂಡವಾಳ ಹಾಗೂ ಅವಧಿ ಸಾಲಗಳಿಗೂ ಅನ್ವಯವಾಗುತ್ತದೆ.

3 ಸಾಲಗಾರನ ಜಮೀನಿನ ಒಡೆತನ ಹಾಗೂ ಪಡೆದ ಸಾಲದ ಮೇಲೆ ಯಾವುದೇ ಗರಿಷ್ಠಮಿತಿ ಇಲ್ಲ.

4 ಉದ್ದೇಶಪೂರ್ವಕವಾಗಿ ಕಟಬಾಕಿದಾರರಾದವರಿಗೆ ಈ ಸೌಲಭ್ಯ ದೊರಕುವುದಿಲ್ಲ. (ಉದ್ದೇಶಪೂರ್ವಕ ಕಟಬಾಕಿದಾರರಿಗೆ ಸ್ಪಷ್ಟ ತಿಳುವಳಿಕೆ ನೀಡಲಾಗಿದೆ)

5 ಈ ಪರಿಹಾರದ ಹಣವನ್ನು ಸರ್ಕಾರಿ ಕ್ಷೇತ್ರದ ಬ್ಯಾಂಕುಗಳಿಗೆ ಕೇಂದ್ರ ಸರ್ಕಾರ ತುಂಬಿಕೊಡುತ್ತದೆ.

## ಭಾರತೀಯ ರಿಸರ್ವ ಬ್ಯಾಂಕಿನ ಉದರಿ ನೀತಿ

1990-91ರ ಪ್ರಥಮಾರ್ಧದ ಉದರಿ ನೀತಿಯನ್ನು 12–4–90ರಂದು ಭಾರತೀಯ ರಿಸರ್ವ ಬ್ಯಾಂಕಿನ ಗವರ್ನರರು ಪ್ರಚುರಪಡಿಸಿದರು, ಅದರ ಮುಖ್ಯ ಅಂಶಗಳೆಂದರೆ :

1 2–9–1990 ರಿಂದ ಪರಿನಿಯತ ದ್ರವತ್ವ ಅನುಪಾತವನ್ನು 38.5ಕ್ಕೆ ಹೆಚ್ಚಿಸಲಾಗಿದೆ. ಅನಿವಾಸಿ ಹಾಗೂ ವಿದೇಶಿ ಕರೆನ್ಸಿಗಳ ಅನಿವಾಸಿ ಖಾತೆಗಳ ಮೇಲಣ ಪರಿನಿಯತ ದ್ರವತ್ವ ಅನುಪಾತವನ್ನು ಶೇ.25ರಿಂದ ಶೇ. 30ಕ್ಕೆ (28–7–90) ಹೆಚ್ಚಿಸಲಾಗುವುದು.

2 ರಫ್ತು ಉದರಿ ಪುನರ್ಧನ ಸೌಲಭ್ಯವನ್ನು 1988–89 ಮಾಸಿಕ ಸರಾಸರಿ ಮೇಲಿನ ಹೆಚ್ಚಳದ ಶೇ. 75 ರಷ್ಟಕ್ಕೆ ಸೀಮಿತಗೊಳಿಸಲಾಗುವುದು.

3 182 ದಿನಗಳ ಖಜಾನೆ ಹುಂಡಿಗಳ ಆಧಾರದ ಪುನರ್ಧನದ ಮೇಲೆ ಬಡ್ಡಿಯ ದರ 0.5ರಷ್ಟು ಹೆಚ್ಚಿಸಲಾಗಿದೆ.

4 ನಗದು ಮೀಸಲು ಅನುಪಾತವನ್ನು ಅನುಸರಿಸದ ಬ್ಯಾಂಕುಗಳಿಗೆ ವಿಧಿಸುವ ದಂಡವನ್ನು ಹೆಚ್ಚಿಸಲಾಗಿದೆ.

5 ಕರೆಹಣ ಪೇಟೆಯನ್ನು ಚುರುಕುಗೊಳಿಸಲು ಸಾಮಾನ್ಯ ವಿಮಾ ನಿಗಮ, ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕ್, ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ ಪೇಟೆಯಲ್ಲಿ ಸಾಲಿಗರಾಗಿ ಭಾಗವಹಿಸಲು ಅವಕಾಶ ಮಾಡಿಕೊಡಲಾಗಿದೆ.

## ಠೇವಣಿ ಪತ್ರ ಹಾಗೂ ವಾಣಿಜ್ಯ ಪತ್ರ

ಹಣ ಪೇಟೆಯನ್ನು ಚುರುಕುಗೊಳಿಸಲು ಜಾರಿಗೆ ತಂದ ಮೇಲಣ ಹೊಸ ಸಂಲೇಖಗಳ ನೀಡುವಿಕೆಯಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಲಾಗಿದೆ. ಈ ಮಾರ್ಪಾಟುಗಳ ಉದ್ದೇಶ ಈ ಸಂಲೇಖಗಳನ್ನು ಹೆಚ್ಚು ಜನಪ್ರಿಯಗೊಳಿಸುವುದೇ ಆಗಿದೆ.

1 ಅನುಸೂಚಿತ ವಾಣಿಜ್ಯ ಬ್ಯಾಂಕ್ ನೀಡಬಹುದಾದ ಠೇವಣಿ ಪತ್ರದ ಗರಿಷ್ಠ ಮೊತ್ತವನ್ನು ತನ್ನ ಗರಿಷ್ಠ ಠೇವಣಿಗಳ ಪಾಕ್ಷಿಕ ಸರಾಸರಿಯ ಶೇ. 1ರಿಂದ ಶೇ. 2ಕ್ಕೆ ಹೆಚ್ಚಿಸಲಾಗಿದೆ.

2 ಠೇವಣಿ ಪತ್ರವನ್ನು ಈಗ ರೂ. 10 ಲಕ್ಷದ ಗುಣಕಗಳಲ್ಲಿ ನೀಡಬಹುದು. ಆದರೆ ವಿನಿಯೋಜನದ ಕನಿಷ್ಠಮಿತಿ ರೂ. 50 ಲಕ್ಷ.

3 ವಾಣಿಜ್ಯ ಪತ್ರ ನೀಡಬಯಸುವ ಕಂಪನಿಯ ಕನಿಷ್ಠ ನಿವ್ವಳ ಸಂಪತ್ತಿಯನ್ನು ರೂ.10 ಕೋಟಿಯಿಂದ ರೂ. 5 ಕೋಟಿಗೆ ಇಳಿಸಲಾಗಿದೆ.

4 ಕನಿಷ್ಠ ದುಡಿಯುವ ಬಂಡವಾಳದ ಮಿತಿಯನ್ನು ರೂ 25 ಕೋಟಿಯಿಂದ ರೂ 15 ಕೋಟಿಗೆ ಇಳಿಸಲಾಗಿದೆ.

5 ಭಾರತೀಯ ಉದರಿ ದರ್ಜೆ ಮಾಹಿತಿ ಸೇವೆ ಸಂಸ್ಥೆಯಿಂದ ಪಡೆದ ಉದರಿ ದರ್ಜೆ ಕನಿಷ್ಠ P1 ಇರಬಹುದು.

6 ವಾಣಿಜ್ಯ ಪತ್ರ ರೂ. 10 ಲಕ್ಷದ ಗುಣಕಗಳಲ್ಲಿದ್ದು ಕನಿಷ್ಠ ವಿನಿಯೋಜನೆಯನ್ನು ರೂ 50 ಲಕ್ಷಕ್ಕೆ ಇಳಿಸಲಾಗಿದೆ.

## ಸಣ್ಣ ಕೈಗಾರಿಕೆ ಅಭಿವೃದ್ಧಿ ಬ್ಯಾಂಕು

ಭಾರತದ ಸಣ್ಣ ಕೈಗಾರಿಕೆ ಅಭಿವೃದ್ಧಿ ಬ್ಯಾಂಕ್ ಏಪ್ರಿಲ್ 1990 ರಿಂದ ಕಾರ್ಯಾರಂಭ ಮಾಡಿದೆ. ರಾಷ್ಟ್ರದ ಎಲ್ಲಾ 25 ರಾಜ್ಯಗಳಲ್ಲೂ ತನ್ನ ಕಛೇರಿ ಹೊಂದಿರುವ ಈ ಬ್ಯಾಂಕು ಸಣ್ಣ ಹಾಗೂ ಕಿರು ಕೈಗಾರಿಕೆಗಳ ಪ್ರವರ್ತನೆ,

ಹಣಕಾಸು ಪೂರೈಕೆ, ಅಭಿವೃದ್ಧಿಗಾಗಿ ಶ್ರಮಿಸುವುದರ ಜೊತೆಗೆ ಇಂತಹ ಚಟುವಟಿಕೆಗಳಲ್ಲಿ ತೊಡಗಿದ ಇತರ ಸಂಸ್ಥೆಗಳ ಕಾರ್ಯವನ್ನು ಸಮನ್ವಯ ಗೊಳಿಸುವ ಹೊಣೆ ಹೊತ್ತಿದೆ.

## ಕೃಷಿ ಉದರಿ ವಿಮರ್ಶನ ಸಮಿತಿಯ ಶಿಫಾರಸುಗಳು

ಕೃಷಿ ಉದರಿ ವಿಮರ್ಶನ ಸಮಿತಿ ಈ ಕೆಳಗಣ ಶಿಫಾರಸುಗಳನ್ನು ಮಾಡಿದೆಯೆಂದು ಲೋಕಸಭೆಗೆ ತಿಳಿಸಲಾಯಿತು.

1 ಕೃಷಿ ಸಾಲಗಳ ಮೇಲಣ ಬಡ್ಡಿಯ ಸ್ವರೂಪ ಸರಳವಾಗಿರಬೇಕು ಹಾಗೂ ರಿಯಾಯಿತಿಯನ್ನು ಆದಷ್ಟು ಕಡಿಮೆಗೊಳಿಸಬೇಕು.
2 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಪ್ರಾಯೋಜಿತ ಬ್ಯಾಂಕುಗಳೊಡನೆ ವಿಲೀನಗೊಳಿಸಬೇಕು.
3 ಪೂರ್ವ ಹಾಗೂ ಈಶಾನ್ಯ ಪ್ರದೇಶಕ್ಕೆ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಸ್ಥಾಪನೆ.
4 ರಾಷ್ಟ್ರೀಯ ಸಹಕಾರಿ ಬ್ಯಾಂಕಿನ ಸ್ಥಾಪನೆ.
5 ರಾಷ್ಟ್ರೀಯ ಬೆಳೆ ವಿಮಾ ನಿಗಮದ ಸ್ಥಾಪನೆ.

ಈ ಶಿಫಾರಸುಗಳು ಭಾರತೀಯ ರಿಸರ್ವ್ ಬ್ಯಾಂಕ್ ಮತ್ತು ಭಾರತದ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಪರಿಶೀಲನೆಯಲ್ಲಿವೆ.

## ಭಾರತದ ಪ್ರತಿಭೂತಿ ಮತ್ತು ವಿನಿಮಯ ಮಂಡಳಿ

ಎಲ್ಲ ವಣಿಕ ಬ್ಯಾಂಕುಗಳು ತಾವು ಕಾರ್ಯಪ್ರಾರಂಭಿಸುವುದಕ್ಕೆ ಮುಂಚೆ ಭಾರತದ ಪ್ರತಿಭೂತಿ ಮತ್ತು ವಿನಿಮಯ ಮಂಡಳಿಯಿಂದ ಅನುಮತಿ ಪಡೆಯುವುದು ಈಗ ಕಡ್ಡಾಯ. ನೀಡಿಕೆ ವ್ಯವಸ್ಥಾಪನ, ಸಮಾಲೋಚನ, ಸಲಹೆ ನೀಡುವ ಸೇವೆ ಸಲ್ಲಿಸುವ ಸಂಸ್ಥೆಗಳು ಕಾರ್ಯ ನಿರ್ವಹಿಸುವ ಮುನ್ನ ಈ ಅನುಮತಿ ಪಡೆಯಬೇಕು.

## ಬ್ಯಾಂಕುಗಳ ಅಥಾವೆಪಟ್ಟಿಯಲ್ಲಿ ಮಾರ್ಪಾಡು

ವಾಣಿಜ್ಯ ಬ್ಯಾಂಕುಗಳ ಆರ್ಥಿಕಸ್ಥಿತಿಯ ನಿಜಸ್ವರೂಪ ತಿಳಿಸುವ ದೃಷ್ಟಿಯಿಂದ ಅಥಾವೆ ಪಟ್ಟಿಯಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಲು ಸರ್ಕಾರ ಉದ್ದೇಶಿಸಿದೆ. ಸರಕಾರ ಭಾರತೀಯ ರಿಸರ್ವ್ ಬ್ಯಾಂಕಿನೊಡನೆ ಸಮಾಲೋಚಿಸಿ ಹಂತಹಂತವಾಗಿ ಈ ಮಾರ್ಪಾಟುಗಳನ್ನು ಜಾರಿಗೆತರಲಿದೆ.

## ಪರಸ್ಪರ ನಿಧಿ : ಮಾರ್ಗದರ್ಶಿ ಸೂತ್ರಗಳು

ಪರಸ್ಪರ ನಿಧಿಯ ಅಭಿವೃದ್ಧಿ ಹಾಗೂ ಅವುಗಳು ಸರಿಯಾಗಿ ಕಾರ್ಯ ನಿರ್ವಹಿಸುವುದನ್ನು ಖಾತರಿಗೊಳಿಸಲು ಭಾರತೀಯ ರಿಸರ್ವ್ ಬ್ಯಾಂಕ್ ಮಾರ್ಗದರ್ಶಿ ಸೂತ್ರಗಳನ್ನು ನೀಡಿದೆ. ಈ ಎಲ್ಲಾ ನಿಧಿಗಳೂ ಬಂಡವಾಳ ನೀಡಿಕೆ ನಿಯಂತ್ರಕರಿಂದ ಒಪ್ಪಿಗೆ ಪಡೆಯುವುದರ ಜೊತೆಗೆ, ಭಾಕತದ ಪ್ರತಿಭೂತಿ ಮತ್ತು ವಿನಿಮಯ ಮಂಡಳಿಯಲ್ಲಿ ನೋಂದಾವಣೆ ಮಾಡಿಸಬೇಕು. ಪ್ರವರ್ತಕ ಕಂಪನಿಗಳು ಕನಿಷ್ಠ ರೂ 2 ಕೋಟಿ ವಂತಿಗೆ ನೀಡಬೇಕು. ಕಂಪನಿಯೊಂದರ ಷೇರುಗಳಲ್ಲಿ ಶೇ. 5ಕ್ಕಿಂತ ಹೆಚ್ಚುಹಣವನ್ನು ವಿನಿಯೋಜಿಸು ವಂತಿಲ್ಲ. ತನ್ನ ಆದಾಯದ ಕನಿಷ್ಠ ಶೇ. 80 ರಷ್ಟನ್ನು ಕಡ್ಡಾಯವಾಗಿ ನಿಧಿಯ ವಿನಿಯೋಜಕರಿಗೆ ಹಂಚಬೇಕು. ಪ್ರತಿ ಯೋಜನೆಗೂ ಪ್ರತ್ಯೇಕ ಲೆಕ್ಕ ಇಡಬೇಕು.

ಈ ಮಾರ್ಗದರ್ಶಿ ಸೂತ್ರಗಳಿಂದ ವಿನಿಯೋಜಕರ, ಅದರಲ್ಲೂ ಸಣ್ಣ ವಿನಿಯೋಜಕರ, ಹಿತಕ್ಕೆ ಧಕ್ಕೆಯಾಗುವುದಿಲ್ಲ ಎಂಬುದು ಗಮನಾರ್ಹ ಸಂಗತಿ.

## ಗ್ರಾಹಕರಿಗೆ ವಿಮೆ

ಬ್ಯಾಂಕ್ ಆವರಣದಲ್ಲಿ ಆಗುವ ಅಪಘಾತಗಳಿಂದ ಗ್ರಾಹಕರಿಗೆ ಹಾಗೂ ಬ್ಯಾಂಕ್ ಸಿಬ್ಬಂದಿಗೆ ಪರಿಹಾರ ನೀಡಲು ಸಾಮಾನ್ಯ ವಿಮಾ ನಿಗಮ ವಿಮಾ ಯೋಜನೆಯೊಂದನ್ನು ಜಾರಿಗೆ ತಂದಿದೆ. ಈ ಯೋಜನೆಯಡಿ, ಅಪಘಾತ ಸಂಭವಿಸಿದಾಗ ಸಂಬಂಧಿಸಿದ ಬ್ಯಾಂಕ್ ಅಪಘಾತದಿಂದ ನೊಂದ ಸಿಬ್ಬಂದಿಗೆ, ಗ್ರಾಹಕರಿಗೆ ಪರಿಹಾರ ನೀಡಿ, ವಿಮಾಕಂಪನಿಯಿಂದ ಹಣ ಪಡೆಯುತ್ತದೆ. ಪರಿಹಾರದ ಗರಿಷ್ಠಮಿತಿ ರೂ 1 ಲಕ್ಷ.

## ಬ್ಯಾಂಕು ನಷ್ಟದಲ್ಲಿ

ಸರ್ಕಾರಿ ಕ್ಷೇತ್ರದ ನ್ಯೂ ಬ್ಯಾಂಕ್ ಆಫ್ ಇಂಡಿಯಾ 31–3–90ರ ವರ್ಷಾಂತ್ಯಕ್ಕೆ ನಷ್ಟ ತೋರಿಸಿದೆ. ಸರ್ಕಾರಿ ಕ್ಷೇತ್ರದ ಬ್ಯಾಂಕೊಂದು ನಷ್ಟ ತೋರಿಸುತ್ತಿರುವುದು ಇದೇ ಮೊದಲ ಸಲ. ಬ್ಯಾಂಕುಗಳು ತಮ್ಮ ಅಥಾವೆ ಪಟ್ಟಿಗಳಲ್ಲಿ ಸರಿಯಾದ ಚಿತ್ರ ಕೊಡದೆ ಸಾರ್ವಜನಿಕರನ್ನು ತಪ್ಪುದಾರಿಗೆ ಎಳೆಯುತ್ತವೆ ಎಂಬ ದೂರು ಹಲವು ವರುಷಗಳಿಂದ ಕೇಳಿಬರುತ್ತಿದ್ದು ಸರ್ಕಾರ ಈ ಬಗ್ಗೆ ಕೆಲವು ನಿರ್ದಿಷ್ಟ ನಿರ್ದೇಶನಗಳನ್ನು ರಿಸರ್ವ್ ಬ್ಯಾಂಕ್ ಮೂಲಕ ನೀಡಿದೆ.

## ಬ್ಯಾಂಕುಗಳ ಸಾಮ್ಯ ಬಂಡವಾಳದಲ್ಲಿ ಹೆಚ್ಚಳ

ಎಂಟು ಪ್ರಮುಖ ಬ್ಯಾಂಕುಗಳ ಪಾವತಿಯಾದ ಬಂಡವಾಳವನ್ನು ರೂ. 700 ಕೋಟಿಗಳಷ್ಟು ಹೆಚ್ಚಿಸಲಾಗಿದೆ.

## ಭಾರತದ ಉದರಿ ದರ್ಜೆಯಲ್ಲಿ ಇಳಿತ

ಸ್ಟ್ಯಾಂಡರ್ಡ್ ಅಂಡ್ ಪೂರ್ ರೇಟಿಂಗ್ ಗ್ರೂಪ್ ಭಾರತದ ಉದರಿ ದರ್ಜೆಯನ್ನು BBB ಎಂದು ತಿಳಿಸಿದೆ. ಈ ಉದರಿ ದರ್ಜೆಯಿಂದ ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಹಣ ಸಂಗ್ರಹಿಸಲು ಭಾರತೀಯ ಕಂಪನಿಗಳು ಹೆಚ್ಚಿನ ಬಡ್ಡಿ ತೆರಬೇಕಾಗಬಹುದು.

## ಭಾರತೀಯ ಸ್ಟೇಟ್ ಬ್ಯಾಂಕ್‌ಗೆ 130ನೆಯ ಸ್ಥಾನ

'ಬಿಸನೆಸ್ ವೀಕ್ ಇಂಟರ್‌ನ್ಯಾಷನಲ್' ಪತ್ರಿಕೆಯ ಸರ್ವೆಯೊಂದರ ಪ್ರಕಾರ ಭಾರತೀಯ ಸ್ಟೇಟ್ ಬ್ಯಾಂಕಿಗೆ ವಿಶ್ವದ 200 ಬ್ಯಾಂಕುಗಳಲ್ಲಿ 130ನೆಯ ಸ್ಥಾನ ಲಭಿಸಿದೆ. ಆದರೆ ಲಾಭಪ್ರದತೆಯ ದೃಷ್ಟಿಯಿಂದ ದೊರಕಿದ ಸ್ಥಾನ 178ನೆಯದು. ಏಷ್ಯಾದ ಯಾವುದೇ ಬ್ಯಾಂಕಿಗೂ ಈ ಪಟ್ಟಿಯಲ್ಲಿ ಸ್ಥಾನವಿಲ್ಲದಿರುವುದು ಭಾರತೀಯ ಸ್ಟೇಟ್ ಬ್ಯಾಂಕ್ ಹಿರಿಮೆಯನ್ನು ತೋರಿಸುತ್ತದೆ.

## ಸೇವಾಶುಲ್ಕದಲ್ಲಿ ಹೆಚ್ಚಳ

ಬ್ಯಾಂಕುಗಳು ಸಲ್ಲಿಸುವ ಎಲ್ಲಾಬಗೆಯ ಸೇವೆಗಳ ಮೇಲಣ ಶುಲ್ಕವನ್ನು ಹೆಚ್ಚಿಸಲಾಗಿದೆ. ಆದರೆ ಸಣ್ಣ ಪ್ರಮಾಣದ ವಹಿವಾಟುದಾರರಿಗೆ ಇದರಿಂದ ಹೆಚ್ಚಿನ ಹೊರೆಯಾಗದು. ಪ್ರಥಮ ಬಾರಿಗೆ ಕಾಲಿಗ್ರ ಚೆಕ್ ಜಾರಿಯಲ್ಲಿರುವ ಮಹಾನಗರಗಳ ಚಾಲ್ತಿಖಾತೆ ಗ್ರಾಹಕರು ತಾವು ಪಡೆಯುವ ಪ್ರತಿ ಚೆಕ್‌ಗೆ ಹಣ ನೀಡಬೇಕಾಗಿದೆ. ಇದರ ಬಗ್ಗೆ ಗ್ರಾಹಕ ಸಂಘಗಳಿಂದ ತೀವ್ರ ವಿರೋಧ ವ್ಯಕ್ತವಾಗಿದೆ.

## ನೇಮಕಾತಿಗಳು

| | |
|---|---|
| ರಶೀದ್ ಜಿಲಾನಿ : | ಅಧ್ಯಕ್ಷರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಪಂಜಾಬ್ ನ್ಯಾಷನಲ್ ಬ್ಯಾಂಕ್ |
| ಡಾ॥ ಎ. ಸಿ. ಷಾ : | ಅಧ್ಯಕ್ಷರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಬ್ಯಾಂಕ್ ಆಫ್ ಬರೋಡ |
| ಎಸ್. ಪಿ. ತಲ್ವಾರ್ : | ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಯೂನಿಯನ್ ಬ್ಯಾಂಕ್ ಆಫ್ ಇಂಡಿಯ |
| ಎಸ್. ಕೆ. ಸೋನಿ : | ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಓರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್ ● |

MYSORE PRINTING AND PUBLISHING HOUSE, MYSORE-1